



# ನವಿಲು ಹೆಜ್ಜೆ

ಶಿವಮೊಗ್ಗ ಕರ್ನಾಟಕ ಸಂಘದ ತ್ರೈಮಾಸಿಕ ವಾರ್ತಾಪತ್ರ

ಸ್ಥಾಪನೆ:೮-೧೧-೧೯೩೦

ಖಾಸಗಿ ಪ್ರಸಾರಕ್ಕಾಗಿ ಮಾತ್ರ

ಕರ್ನಾಟಕ ಸಂಘ(ರಿ.) (ಹಸೂಡಿ ವೆಂಕಟಶಾಸ್ತ್ರಿಗಳ ಸಾಹಿತ್ಯ ಭವನ) ಬಿಹೆಚ್.ರಸ್ತೆ, ಶಿವಮೊಗ್ಗ-೫೭೭ ೨೦೧. ದೂ:೦೮೧೮೨-೨೭೭೪೦೬

ಸಂಪುಟ ೪,ಸಂಚಿಕೆ ೧-೨, ಪುಟಗಳು ೪೦ ಜನವರಿ-ಜೂನ್, ೨೦೧೪ ಈ-ಮೇಲ್: ksanghasmg@gmail.com ಸಂಪಾದಕರು : ಸರ್ಜಾಶಂಕರ ಹರಳಿಮಠ


# ಕರ್ನಾಟಕ ಸಂಘ ಪುಸ್ತಕ ಬಹುಮಾನ-೨೦೧೩
# ವಿಶೇಷ ಸಂಚಿಕೆ




(ಪುಟ ೧೯-೩೪)



## ಪ್ರಭುತ್ವವೆಂಬ ಸ್ಥಾವರವೂ, ಕಲೆಯೆಂಬ ಜಂಗಮವೂ...

● ಡಾ. ಬಂಜಗೆರೆ ಜಯಪ್ರಕಾಶ

ಕಲೆ ಎಂಬುದು ಪ್ರಶ್ನೆಗಳಿಗೆ ಉತ್ತರ ಕೊಡುವುದಕ್ಕಿಂತ ಹೆಚ್ಚಾಗಿ ಪ್ರಶ್ನೆಗಳನ್ನು ಹುಟ್ಟಿಸುತ್ತದೆ. ಕಲೆ ತನಗೆ ಗೊತ್ತಿಲ್ಲದಿರುವ ಬಿಂದುವಿನಿಂದ ಗೊತ್ತಾಗಬೇಕಿರುವ ನೆಲೆಯ ಕಡೆಗೆ ತನ್ನನ್ನು ನಿರ್ದೇಶಿಸಿಕೊಳ್ಳುತ್ತದೆ. ಆದ್ದರಿಂದ ಅದಕ್ಕೆ ಒಂದು ಪರಿಶೀಲನಾತ್ಮಕ ಸ್ವಭಾವವಿದೆ. ಸರಿಯಾಗಿ ಹೇಳಬೇಕೆಂದರೆ ಕಲೆ ಉತ್ತರಗಳನ್ನು ಹೊಂದಿರುವುದು ಕಡಿಮೆ. ಅದರ ಪ್ರಶ್ನೆಗಳೊಳಗೆ ಕೆಲವು ಸಲ ಉತ್ತರಗಳೆಂಬವು ಅಡಗಿಸಲ್ಪಟ್ಟಿರಬಹುದು. ಹಾಗೆಯೇ ಕೆಲವು ಸುಳಿವುಗಳಿರಬಹುದು. ಹಾಗೆಯೇ ಸಾಧ್ಯತೆಗಳ ಹೊಳಹುಗಳಿರಬಹುದು. ಆದರೆ ಖಂಡಿತವಾಗಿ ನಿಶ್ಚಿತಾರ್ಥಗಳಿಲ್ಲ. (ಪುಟ ೨೦)






ಕುಣಿಕುಣಿ ಲಲನೆ ಕುಣಿಕುಣಿ ಮದನೆ, ಕುಣಿಯೇ ನವಿಲಂತೆ।
ಬಿರುಬಿಸಿಲಿಗೆ ಗಾರೊಡೆದಿಹ ನಾಡಲಿ ಮೇಘವು ಕರೆವಂತೆ॥

–ಎಚ್.ಎಸ್.ಶಿವಪ್ರಕಾಶ್

# ‘ಕಲೆ’ ನಿಂತ ನೀರಾಗದಿರಲಿ!!



● ವಿಜಯಾ ಶ್ರೀಧರ್

ಭಾವವು ಸಾಂದ್ರವಾದರೆ ರಸ, ರಸೋತ್ಪತ್ತಿಯೇ ಕಲೆಯ ಅಂತಿಮ ಗುರಿ. ನಿಜ, ಆದರೆ ಕಲೆ ನಿಂತ ನೀರಾದರೆ .....? ಪ್ರಯೋಗಶೀಲತೆಯೇ ಇಲ್ಲದಿದ್ದರೆ ......? ಕಾಲ ಕಾಲಕ್ಕೆ ಯಾವುದೇ ಕಲೆಯಲ್ಲಿ ಬದಲಾವಣೆ, ಪರಿಷ್ಕರಿಸುವ ಕೆಲಸ ಆಗಬೇಕು. ಕಲೆಯ ಮೂಲ ಸೌಂದರ್ಯಕ್ಕೆ ಹಾನಿಯಾಗದಂತೆ ಬದಲಾವಣೆಗಳು ಬರಬೇಕು. ಹೊಸ, ಹೊಸ ಪ್ರಯೋಗಗಳಿಂದ ಕಲೆ ನಿತ್ಯ ನೂತನವೆನಿಸಬೇಕು. ಇದರರ್ಥ ಕಲೆ ಸಂಪ್ರದಾಯದ ಚೌಕಟ್ಟು ಮೀರಬೇಕು ಎಂದಲ್ಲ. ಸಂಪ್ರದಾಯಬದ್ಧ ಶಿಕ್ಷಣ, ಶಾಸ್ತ್ರದಲ್ಲಿ ಆಳವಾದ ಅಧ್ಯಯನದ ನಂತರವೇ ಹೊಸ ಪ್ರಯೋಗಗಳು ಜನ್ಮ ತಾಳಬೇಕು. ಪ್ರತಿಭಾ ಸಂಪನ್ನರಾದ ಕಲಾವಿದರು, ಸಾಹಿತಿಗಳು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಹೊಸ, ಹೊಸ ಆವಿಷ್ಕಾರಗಳನ್ನು ಮಾಡುತ್ತಾರೆ, ತಮ್ಮ ಈ ಶಕ್ತಿಯಿಂದಾಗಿಯೇ ಶ್ರೇಷ್ಠರೆನಿಸುತ್ತಾರೆ, ಕೆಲವು ಬಾರಿ ಟೀಕೆ, ವಿರೋಧವನ್ನೂ ಎದುರಿಸುತ್ತಾರೆ.

ಇತ್ತೀಚೆಗೆ ಕರ್ನಾಟಕ ಸಂಘದಲ್ಲಿ ನಡೆದ ಕೆಲವಾರು ಕಾರ್ಯಕ್ರಮಗಳು ಅಪ್ರತ್ಯಕ್ಷವಾಗಿ ಇದನ್ನೇ ಸಾರಿದವು. ೧೩.೩.೨೦೧೪ರಂದು ಅಂತರ್ರಾಷ್ಟ್ರೀಯ ಮಹಿಳಾ ದಿನಾಚರಣೆಯ ನಿಮಿತ್ತವಾಗಿ ನಡೆದ ಮಹಿಳಾ ಯಕ್ಷಗಾನ ಶಿವರಾಮ ಕಾರಂತರ ಪ್ರಯೋಗಗಳನ್ನು, ಸಾಹಸಗಳನ್ನು ನೆನಪಿಗೆ ತಂದವು. ಇಡೀ ರಾತ್ರಿ ನಡೆಯುತ್ತಿದ್ದ ಯಕ್ಷಗಾನವನ್ನು ಈ ಕಾಲದ ಪ್ರೇಕ್ಷಕರಿಗೆ ಮತ್ತು ವಿದೇಶಗಳಲ್ಲಿ ಪ್ರದರ್ಶನಕ್ಕೆ ಯೋಗ್ಯವಾಗುವಂತೆ ಮೂರು ಗಂಟೆಯ ಅವಧಿಗೆ ಸೀಮಿತಗೊಳಿಸಿದ್ದು, ಸ್ತ್ರೀ ಪಾತ್ರಗಳನ್ನು ಮಹಿಳೆಯರೇ ಮಾಡುವಂತೆ ಪ್ರೇರೇಪಣೆ ನೀಡಿದ್ದು ಕಾರಂತರು. ವಿದೇಶಿ ಮಹಿಳೆಯರಿಗೂ ಯಕ್ಷಗಾನದ ತರಬೇತಿ ನೀಡಿ, ಯಕ್ಷರಂಗಕ್ಕೆ ತಂದ ಕೀರ್ತಿ ಕಾರಂತರದು. ಆಗ ಟೀಕೆ, ವಿರೋಧಗಳು ವ್ಯಕ್ತವಾಗಿದ್ದರೂ, ಈಗ ಸಂಪೂರ್ಣವಾಗಿ ಮಹಿಳೆಯರೇ ಭಾಗವಹಿಸುವ, ಪೌರುಷ ಪ್ರಧಾನವಾದ ಭೀಮ, ಕೀಚಕ, ಕಂಸ .... ಮುಂತಾದ ಪಾತ್ರಗಳನ್ನು ಮಹಿಳೆಯರೇ ಸಮರ್ಥವಾಗಿ ನಿಭಾಯಿಸುವ ಯಕ್ಷಗಾನಗಳನ್ನು ನೂಡುತ್ತಿದ್ದೇವೆ.

ಕರ್ನಾಟಕ ಸಂಘದಲ್ಲಿ ಪ್ರದರ್ಶನಗೊಂಡ “ಜ್ವಾಲಾ ಪ್ರತಾಪ” ಮಹಿಳಾ ಮಣಿಗಳ ಪ್ರತಾಪವನ್ನು ಎತ್ತಿ ತೋರಿಸಿ, ಪ್ರೇಕ್ಷಕರನ್ನು ಬೆರಗುಗೊಳಿಸಿದ್ದು ಸುಳ್ಳಲ್ಲ! ಯಕ್ಷಗಾನ ಕ್ಷೇತ್ರದಲ್ಲಿ ಹಲವಾರು ರೀತಿಯ ಪ್ರಯೋಗಗಳು ನಡೆಯುತ್ತಲೇ ಇವೆ. ಭಕ್ತಿ ಭಂಡಾರಿ ಬಸವಣ್ಣನ ಕುರಿತು, ಪರಿಸರ ಕಾಪಾಡುವ ಕುರಿತು ಯಕ್ಷಗಾನ ಪ್ರಯೋಗಗಳಾಗಿವೆ. ಹಾಗೇ, ಏಕವ್ಯಕ್ತಿ ಪ್ರದರ್ಶನಗಳು ನಡೆದು ಮನಸೂರೆಗೊಂಡಿವೆ.

ಏಕವ್ಯಕ್ತಿ ಪ್ರದರ್ಶನ ಅಂದ ಕೂಡಲೇ ನಾಟಕ ರಂಗದ ವಿಶಿಷ್ಟ ಹಿರಿಯ ಪ್ರತಿಭೆ ಮಾಸ್ಟರ್ ಹಿರಣ್ಣಯ್ಯನವರ ಕಾರ್ಯಕ್ರಮ ನೆನಪಾಗದೇ ಇರದು. ೧೫.೦೩.೨೦೧೪ರಂದು ನಡೆಯಬೇಕಾಗಿದ್ದ ಕಾರ್ಯಕ್ರಮ ಅನಿವಾರ್ಯವಾಗಿ ೨೦.೦೩.೨೦೧೪ರಂದು ನಡೆದರೂ, ಕರ್ನಾಟಕ ಸಂಘ ತುಂಬಿ ತುಳುಕುತ್ತಿತ್ತು. ಇಳಿವಯಸ್ಸಿನಲ್ಲೂ ತಮ್ಮ ಹರಿತವಾದ ಮಾತುಗಳಿಂದ ಸಮಾಜದ, ಕಲಾವಿದರ, ರಾಜಕಾರಣಿಗಳನ್ನು ತರಾಟೆಗೆ ತೆಗೆದುಕೊಂಡರು. ನನ್ನ ಹದಿಹರೆಯದಲ್ಲಿ ಮಾಸ್ಟರ್ ಹಿರಣ್ಣಯ್ಯನವರ ಕಾರ್ಯಕ್ರಮ ನನ್ನ ತವರೂರು ಶಿರ್ಶಿಯಲ್ಲಿ ನಡೆದಾಗ “ಅವರದು ನಾಟಕವೇ ಅಲ್ಲ, ಏಕವ್ಯಕ್ತಿ ಭಾಷಣ ಪ್ರದರ್ಶನ” ಎಂಬ ಟೀಕೆಗಳು ಬಂದಿದ್ದವು. ಅದೆಲ್ಲವನ್ನೂ ಮೀರಿ ಮಾಸ್ಟರ್ ಹಿರಣ್ಣಯ್ಯ ಬೆಳೆದಿದ್ದಾರೆ. ಅನುಚಿತವಾದ ಘಟನೆಗಳು ಅವರ ಇಳಿ ವಯಸ್ಸಿನಲ್ಲಿ ನಡೆದಿವೆ. ಈಗಿನ ಮುಖ್ಯಮಂತ್ರಿಗಳು, ಎಲ್ಲವನ್ನೂ ಮರೆತು ಇಬ್ಬರೂ ಕೈಕುಲುಕಿದ್ದು ಒಂದು ಆದರ್ಶ ನಡವಳಿಕೆಯ ಮಾದರಿಯಾಗಿದೆ.

ಮಾರ್ಚ್ ೧೬, ೧೭ ಎರಡು ದಿನಗಳ ಕಾಲ ನೀನಾಸಂ ಪ್ರತಿಷ್ಠಾನ, ಹೆಗ್ಗೋಡು ಇವರ ಸಹಯೋಗದಲ್ಲಿ ನಡೆದ ನಾಟಕ ಅಧ್ಯಯನ ಶಿಬಿರ ನಾಟಕ ಕ್ಷೇತ್ರದಲ್ಲಿ ಆಗುತ್ತಿರುವ ಬದಲಾವಣೆಗಳನ್ನು, ನಾಟಕಗಳನ್ನು ಅರ್ಥ ಮಾಡಿಕೊಳ್ಳುವ ಬಗೆಯನ್ನು ಪ್ರಾತ್ಯಕ್ಷಿಕೆಯ ಮೂಲಕ ತೋರಿಸಿಕೊಟ್ಟಿತ್ತು. ಜಾತ್ರೆ, ಸಂತೆ ಕಾಲಗಳಲ್ಲಿ ನಡೆಯುತ್ತಿದ್ದ ಕಂಪನಿ ನಾಟಕಗಳಿಗೂ ಆಧುನಿಕ ನಾಟಕಗಳಿಗೂ ಇರುವ ಅಜಗಜಾಂತರವನ್ನೇ ಗಮನಿಸಬಹುದು. ನಮ್ಮ ಸೂಕ್ಷ್ಮ ಸಂವೇದನೆಯನ್ನು ಹರಿತಗೊಳಿಸುವ ಆಧುನಿಕ ರಂಗಪ್ರಯೋಗಗಳನ್ನು ನೀನಾಸಂ ಪ್ರತಿಷ್ಠಾನ ನಡೆಸಿಕೊಂಡು ಬಂದಿದೆ.

(೬ನೇ ಪುಟಕ್ಕೆ)



| ಕಾರ್ಯಕಾರಿ ಸಮಿತಿ | |
|---|---|
| ಶ್ರೀಮತಿ ವಿಜಯಾ ಶ್ರೀಧರ್ | : ೯೪೪೮೧೮೧೪೧೩ |
| ಶ್ರೀ ಹೆಚ್.ಡಿ. ಉದಯಶಂಕರ ಶಾಸ್ತ್ರಿ, ಉಪಾಧ್ಯಕ್ಷರು | : ೯೪೪೮೮ ೫೫೦೯೦ |
| ಡಾ. ಹೆಚ್.ಎಸ್. ನಾಗಭೂಷಣ | |
| ಗೌರವ ಕಾರ್ಯದರ್ಶಿಗಳು | : ೯೪೪೯೨ ೮೪೪೯೫ |
| ಪ್ರೊ. ಸಿ.ಯು. ಸೋಮಶೇಖರ, ಕೋಶಾಧ್ಯಕ್ಷರು | : ೯೭೪೧೪ ೪೫೯೬೩ |
| ಶ್ರೀಮತಿ ಹೆಚ್.ಎನ್. ಶ್ರೀಲಕ್ಷ್ಮಿ, ಸಹ ಕಾರ್ಯದರ್ಶಿ | : ೯೯೭೨೦ ೫೩೩೦೦ |
| **ಸದಸ್ಯರು** | |
| ಶ್ರೀ ಜಯದೇವಪ್ಪ ಜೈನಕೇರಿ | : ೯೮೮೬೩೭೬೭೯೫ |
| ಪ್ರೊ. ಡಿ.ಎಸ್. ಮಂಜುನಾಥ್ | : ೯೪೮೦೩೯೪೨೪೪ |
| ಡಾ॥ ಹೆಚ್.ಟಿ.ಕೃಷ್ಣಮೂರ್ತಿ | : ೯೪೪೯೫೭೩೪೪೦ |
| ಶ್ರೀಮತಿ ಮಾನಸ ಶಿವರಾಮಕೃಷ್ಣ | : ೯೮೮೬೩ ೧೪೬೭೦ |
| ಶ್ರೀ ಸರ್ಜಾಶಂಕರ ಹರಳಿಮಠ | : ೯೪೪೮೭ ೮೦೧೪೪ |
| ಶ್ರೀ ಎಸ್.ಜಿ. ವಾಸುದೇವ | : ೯೬೬೩೬೦೦೪೨೯ |
| ಪ್ರೊ. ಕೆ.ಜಿ. ವೆಂಕಟೇಶ್ | : ೯೯೪೫೯೨೫೫೪೯ |
| ಡಾ॥ ಕೆ.ಎನ್.ಗುರುದತ್ತ | : ೯೪೪೮೨೩೮೮೪೬ |
| ಶ್ರೀಮತಿ ಅಂಬಿಕಾ ದೇವರಾಜ್ | : ೯೪೮೧೦೯೦೯೨೮ |
| ಶ್ರೀಮತಿ ಎಂ.ಆಶಾಲತಾ | : ೯೫೯೦೭೭೭೨೦೦ |
| ಶ್ರೀ ಪ್ರಕಾಶ್ ಆರ್. ಕಮ್ಮಾರ್ | : ೯೭೬೩೦೫೫೪೦೬ |
| ಶ್ರೀ ಕೆ.ಜಿ. ಸುಬ್ರಹ್ಮಣ್ಯ, ಮಾಜಿ ಅಧ್ಯಕ್ಷರು | : ೯೪೪೮೧೪೨೨೯೧ |
| ಡಾ॥ ತೀ.ನಂ.ಶಂಕರನಾರಾಯಣ , ಮಾಜಿ ಅಧ್ಯಕ್ಷರು | : ೯೪೪೮೮೮೪೧೭೫ |

**ಹೆಜ್ಜೆ ಗೆಜ್ಜೆಯ ಒಟ್ಟಿಗೆ ಕೂಡಿಸಿ ಒಜ್ಜೆಯ ತೆಗೆದೆಸೆದು।**
**ಮಿಂಚಿನ ಗೆರೆ ಕಾರ್ಮೋಡದ ಮೇಲಿರೆ ಬಳಕುವ ಲತೆಯಂತೆ ॥**
**–ಎಚ್.ಎಸ್.ಶಿವಪ್ರಕಾಶ್**





# ಸಾಹಿತಿಗಳನ್ನು ಕೋಡಂಗಿಗಳೆಂದು ಚಿತ್ರಿಸುವ ಹುನ್ನಾರದ ಕುರಿತು



● ಸರ್ಜಾಶಂಕರ ಹರಳಿಮಠ

ಬಹುಮಾನಗಳು, ಪ್ರಶಸ್ತಿಗಳು ಒಂದು ನಾಗರಿಕ ಸಮಾಜದ ಪ್ರಜ್ಞಾವಂತರು ಸಮಾಜದ ಮುಂಚಲನೆಗೆ ಕಾರಣವಾದ ವಿವಿಧ ಕ್ಷೇತ್ರದ ಸಾಧಕರನ್ನು ಪ್ರೋತ್ಸಾಹಿಸಲು, ಅವರವರ ಕ್ಷೇತ್ರಗಳಲ್ಲಿ ಇನ್ನಷ್ಟು ಕೆಲಸ ಮಾಡಲು ಉತ್ಸಾಹ ತುಂಬಲು ನೀಡುವ ಶಕ್ತಿವರ್ಧಕಗಳು. ಈ ನಿಟ್ಟಿನಲ್ಲಿ ಕರ್ನಾಟಕ ಸಂಘ ನೀಡುವ ಪ್ರಶಸ್ತಿಗಳು ಮತ್ತು ಪುಸ್ತಕ ಬಹುಮಾನಗಳು ತನ್ನ ಪಾರದರ್ಶಕತೆಯಿಂದ ನಾಡಿನಾದ್ಯಂತ ಪ್ರತಿಷ್ಠೆಗಳಿಸಿವೆ. 'ನವಿಲು ಹೆಜ್ಜೆ' ಈ ಸಂದರ್ಭದಲ್ಲಿ ವಿಶೇಷ ಸಂಚಿಕೆಯನ್ನು ಹೊರತರುವುದರ ಮೂಲಕ ಈ ಬಾರಿ ಪುಸ್ತಕ ಬಹುಮಾನ ಗಳಿಸಿದ ಎಲ್ಲರಿಗೂ ಅಭಿನಂದನೆಗಳನ್ನು ಸಲ್ಲಿಸುತ್ತಿದೆ.

ಈ ಸಂದರ್ಭದಲ್ಲಿಯೇ ಗಂಭೀರವಾಗಿ ಚಿಂತಿಸಬೇಕಾದ ವಿದ್ಯಮಾನಗಳು ಸಾಹಿತ್ಯಲೋಕದಲ್ಲಿ ನಡೆಯುತ್ತಿವೆ. ನಮ್ಮ ದೊಡ್ಡ ಸಾಹಿತಿಗಳೂ ಕೂಡ ಯಾಕೆ ಹೀಗೆ ಎಡವುತ್ತಾರೋ ಗೊತ್ತಿಲ್ಲ. ಈ ವಿದ್ಯಮಾನ ಸಾಹಿತ್ಯ ಲೋಕದವರಿಗಿರಲಿ, ಜನಸಾಮಾನ್ಯರಿಗೂ ಜಿಗುಪ್ಸೆ ತರಿಸಿದ್ದರೆ ಅಚ್ಚರಿಯಿಲ್ಲ. ಒಂದು ಪ್ರಶಸ್ತಿಗೆ ಸಂಬಂಧಿಸಿದಂತೆ 'ಇವರು ಆ ಪ್ರಶಸ್ತಿಗೆ ಅರ್ಹರು, ಇವರು ಆ ಪ್ರಶಸ್ತಿಗೆ ಅರ್ಹರಲ್ಲ' ಎಂಬ ಆರೋಪಗಳು ಪ್ರಶಸ್ತಿಗಳ ಕುರಿತು ಸಾರ್ವಜನಿಕರಲ್ಲಿ ಈಗಾಗಲೇ ಮೂಡಿರುವ ಅಗೌರವದ ಭಾವನೆಗಳು ಇನ್ನಷ್ಟು ಹೆಚ್ಚಲು ಪ್ರೇರಕವಾದಂತಿದೆ.

ಯಾವುದೇ ಸಾಹಿತಿ ಕೇವಲ ಪ್ರಶಸ್ತಿಗಳ ಮೂಲಕವೇ ಜನರ ಮಾನ್ಯತೆಯನ್ನು ಗಳಿಸಲು ಸಾಧ್ಯವಿಲ್ಲ. ಕೊನೆಗೂ ಮುಖ್ಯವಾಗುವುದು ಆತ ರಚಿಸಿದ ಸಾಹಿತ್ಯ. ಪ್ರಶಸ್ತಿಗಳ ಮೂಲಕ ಬರುವ ಮಾನ್ಯತೆ ಏನಿದ್ದರೂ ಅದು ತಾತ್ಕಾಲಿಕ. ಜ್ಞಾನಪೀಠದಂತಹ ಸಾಹಿತ್ಯಲೋಕದ ಅತ್ಯುನ್ನತ ಪ್ರಶಸ್ತಿಗಳನ್ನು ಪಡೆಯದೇ ಇದ್ದರೂ ಲಂಕೇಶ್, ತೇಜಸ್ವಿ ಇಂತಹ ಪ್ರಶಸ್ತಿಗಳನ್ನು ಪಡೆದ ಕೆಲವು ಸಾಹಿತಿಗಳಿಗಿಂತ ಹೆಚ್ಚು ಓದುಗರನ್ನು ಹೊಂದಿದ್ದಾರೆ ಮತ್ತು ಈಗಲೂ ಚರ್ಚೆಗೆ ಒಳಗಾಗುತ್ತಿದ್ದಾರೆ ಎನ್ನುವುದು ವಾಸ್ತವ ಸಂಗತಿ.

ಸಾಹಿತಿಗಳ ವಿವಾದಕ್ಕೆ ಇನ್ನೊಂದು ಆಯಾಮವೂ ಇದೆ. ಏನೇ ಮಿತಿಗಳಿದ್ದರೂ ನಮ್ಮ ಹಿರಿಯ ಸಾಹಿತಿಗಳು ಈ ಸಮಾಜಕ್ಕೆ ಉಪಯುಕ್ತವಾದ ಸಾಹಿತ್ಯವನ್ನು ವಿವಿಧ ಪ್ರಕಾರಗಳಲ್ಲಿ ರಚಿಸಿದವರು. ಅದು ಸೃಜನಶೀಲ ಎಂಬ ಹಣೆಪಟ್ಟಿ ಹೊತ್ತ ಕತೆ–ಕಾದಂಬರಿ–ಕವಿತೆ–ನಾಟಕಗಳ ಮೂಲಕವಿರಬಹುದು ಅಥವಾ ಸೃಜನೇತರ ಎನ್ನುವ (ಈಗ ಇಂತಹ ಹಣೆಪಟ್ಟಿಗಳನ್ನು ಕಳಚಲಾಗುತ್ತಿದೆ) ಸಂಶೋಧನೆಯಂತಹ ಪ್ರಕಾರಗಳ ಮೂಲಕವಿರಬಹುದು. ಇವರೆಲ್ಲ ಕನ್ನಡದ ಬೌದ್ಧಿಕ ಪ್ರಜ್ಞೆಯನ್ನು ವಿಸ್ತರಿಸಿದವರು. ಕೆಲವರಾದರೂ ಈ ನಾಡಿಗೆ ಏನಾದರೂ ಆತಂಕಗಳು ಎದುರಾದಾಗ ಅದಕ್ಕೆ ಎದೆಗೊಟ್ಟವರು. ಸಾರ್ವಜನಿಕ ಕಾಳಜಿಯ ಪ್ರಶ್ನೆಗಳನ್ನು ಎತ್ತಿದವರು. ಇಂಥವರ ಸಣ್ಣಪುಟ್ಟ ಮಿತಿಗಳನ್ನು ದೊಡ್ಡದಾಗಿ ಬಿಂಬಿಸಿ ಅದನ್ನು ವಿವಾದವಾಗಿ ಬೆಳೆಸುವ ಹಿಂದೆ ಒಂದು ಹುನ್ನಾರವಿದೆ. ಈ ಹುನ್ನಾರವೇನೆಂದರೆ ಸಾಹಿತಿಗಳ ನಿರ್ಲಕ್ಷಿಸಬಹುದಾದ ಈ ಮಿತಿಗಳನ್ನು ಇಡೀ ಸಾಹಿತ್ಯಲೋಕದ ಮಿತಿಗಳೆಂದೂ, ಇಡೀ ಸಾಹಿತ್ಯಲೋಕವೇ ಹಣ–ಪ್ರಶಸ್ತಿಗಾಗಿ ಹಪಾಹಪಿಸುತ್ತಿರುವ ಕೋಡಂಗಿಗಳ ಸಂತೆಯೆಂದು ಸಾರ್ವತ್ರೀಕರಿಸುವುದು. ಆ ಮೂಲಕ ನೈಜಕಾಳಜಿಯಿಂದ ಸಾಹಿತಿಗಳು ಎತ್ತುವ ಸಾರ್ವಜನಿಕ ಕಾಳಜಿಯ ಪ್ರಶ್ನೆಗಳನ್ನು ಅಪಮೌಲ್ಯೀಕರಿಸುವುದು. ದುರಂತವೆಂದರೆ ಇಂತಹ ಹುನ್ನಾರಗಳನ್ನು ಅರಿಯದೇ ಸಾಹಿತಿಗಳೇ ಈ ಹುನ್ನಾರದ ದಾಳಗಳಾಗುತ್ತಿರುವುದು.

## ಈ ಸಂಚಿಕೆ



## ಹೊಸ ಹೆಸರು ಹೊಸ ಕನಸು...

ಕರ್ನಾಟಕ ಸಂಘದ ವಾರ್ತಾಪತ್ರ ಹೊಸ ಮಜಲನ್ನು ಪ್ರವೇಶಿಸುತ್ತಿದೆ. ಹರಗೋಪಾಲ ಭಟ್ಟರು ವಾರ್ತಾಪತ್ರವನ್ನು 'ಮಾಹಿತಿ' ಎಂಬ ಹೆಸರಿನಲ್ಲಿ ಆರಂಭಿಸಿ ಸಾಕಷ್ಟು ಕಾಲ ಮುನ್ನಡೆಸಿದರು. ಕಾರಣಾಂತರಗಳಿಂದ ಹಲವು ವರ್ಷಗಳ ಕಾಲ ಇದು ಸ್ಥಗಿತಗೊಂಡಿತ್ತು. ಜಾನಪದ ವಿದ್ವಾಂಸರಾದ ಡಾ.ತೀ.ನಂ ಶಂಕರನಾರಾಯಣ ಅವರು ಸಂಘದ ಅಧ್ಯಕ್ಷರಾದ ನಂತರ ವಾರ್ತಾಪತ್ರವನ್ನು ಪುನಃ ಆರಂಭಿಸಬೇಕಾದ ಅಗತ್ಯವನ್ನು ಪ್ರತಿಪಾದಿಸಿದರು. ಆಗ ಈ ಜವಾಬ್ದಾರಿಯನ್ನು ಹೊತ್ತುಕೊಂಡವರು ಹಿರಿಯರಾದ ಪ್ರೋ.ಸಿ.ಯು ಸೋಮಶೇಖರ್ ಅವರು. ಇವರು ವಾರ್ತಾಪತ್ರದ ಸಂಪಾದಕರಾಗಿ ಎರಡು ವರ್ಷಗಳಿಗೂ ಹೆಚ್ಚು ಕಾಲ ತಮ್ಮ ಜವಾಬ್ದಾರಿಯನ್ನು ಅಚ್ಚುಕಟ್ಟಾಗಿ ನಿರ್ವಹಿಸಿದರು. ನಂತರದ ಪಾಳಿ ಬಂದದ್ದು ನನಗೆ.



ವಾರ್ತಾಪತ್ರದ ಈ ನಡಿಗೆಯುದ್ದಕ್ಕೂ ಓದುಗರಾದ ನಿಮ್ಮ ಬೆಂಬಲ ನಮಗೆ ಸಿಕ್ಕಿದೆ. ಮತ್ತು ನಿಮ್ಮ ಪ್ರೋತ್ಸಾಹ ನಮ್ಮ ಉತ್ಸಾಹವನ್ನು ಹೆಚ್ಚಿಸಿದೆ. ಈ ಉತ್ಸಾಹದಲ್ಲಿ ಇನ್ನೊಂದು ಮಜಲಿಗೆ ನಾವು ಪ್ರವೇಶಿಸುತ್ತಿದ್ದೇವೆ. ವಾರ್ತಾಪತ್ರದ ಸಂಪಾದಕನ ಜವಾಬ್ದಾರಿಯನ್ನು ಹೊತ್ತುಕೊಂಡ ಮೇಲೆ ಈ ಬಗ್ಗೆ ಹಲವು ಕನಸುಗಳು ಮೂಡಿವೆ.

(ಮುಂದಿನ ಪುಟಕ್ಕೆ)

## ವರ್ಷದ ಹರ್ಷ




ದಿನಾಂಕ:೧೧.೧೧.೨೦೧೪ರಂದು ಸಹಚೇತನ ನಾಟ್ಯಾಲಯ ತಂಡವು ಕರ್ನಾಟಕ ಸಂಘದ ಸಹಯೋಗದಲ್ಲಿ 'ವರ್ಷದ ಹರ್ಷ' ಎಂಬ ನೃತ್ಯ ಕಾರ್ಯಕ್ರಮವನ್ನು ಏರ್ಪಡಿಸಿತ್ತು. ಇಂಗ್ಲೆಂಡಿನ ದೇವಿಕಾ ನೃತ್ಯ ತರಂಗ ಕಲಾವಿದರ ಬಳಗ ದೇವಿಕಾರಾವ್ ನಿರ್ದೇಶನದಲ್ಲಿ 'ಯಾ ದೇವಿ' ಶೀರ್ಷಿಕೆಯ ನೃತ್ಯ ಪ್ರದರ್ಶನವನ್ನು ಪ್ರಸ್ತುತಪಡಿಸಿತು. ರಂಗ ಸಂಘಟಕರಾದ ಶ್ರೀನಿವಾಸ ಜಿ.ಕಪ್ಪಣ್ಣ ಕಾರ್ಯಕ್ರಮ ಉದ್ಘಾಟಿಸಿದರು. ಕರ್ನಾಟಕ ಸಂಘದ ಗೌರವ ಕಾರ್ಯದರ್ಶಿಗಳಾದ ಡಾ. ಎಚ್.ಎಸ್.ನಾಗಭೂಷಣ, ಸಹಚೇತನ ನಾಟ್ಯಾಲಯದ ಗೌರವಾಧ್ಯಕ್ಷ ಎಸ್.ಎನ್. ಚನ್ನಬಸಪ್ಪ, ಅಧ್ಯಕ್ಷರಾದ ಎನ್.ಆರ್.ಪ್ರಕಾಶ್, ಕಲಾವಿದೆ ಸಹನಾ ಚೇತನ್ ಉಪಸ್ಥಿತರಿದ್ದರು. ಕರ್ನಾಟಕ ಸಂಘದ ಉಪಾಧ್ಯಕ್ಷರಾದ ಎಚ್.ಡಿ.ಉದಯಶಂಕರಶಾಸ್ತ್ರಿ ಅಧ್ಯಕ್ಷತೆ ವಹಿಸಿದ್ದರು. 'ಯಾ ದೇವಿ' ನೃತ್ಯ ರೂಪಕವು ಭರತನಾಟ್ಯ ಕೂಚುಪುಡಿ, ಒಡಿಸ್ಸಿ, ಕಥಕ್ ಮತ್ತು ಯಕ್ಷಗಾನ ಶೈಲಿಯ ನೃತ್ಯ ಪ್ರದರ್ಶನಗಳ ಗುಚ್ಛವಾಗಿತ್ತು. ನೇಪಾಳ ಮತ್ತು ಭಾರತೀಯ ಕಲಾವಿದರಾದ ದೇವಿಕಾರಾವ್, ಮ್ಯಾನ್ಯುಯೆಲ್ ಬೆನಿನಿ, ಕೇಟಿ ರ್‍ಯಾನ್ ಮತ್ತು ಪ್ರೇಮ್ ಅವರ ನರ್ತನ ಪ್ರೇಕ್ಷಕರನ್ನು ರಂಜಿಸಿತು. ನೃತ್ಯಕ್ಕೆ ಬೆಳಕು ಮತ್ತು ನೆರಳಿನ ಸಂಯೋಜನೆ ಪರಿಣಾಮಕಾರಿಯಾಗಿತ್ತು.

ನಾವು ನಮ್ಮ ಮಕ್ಕಳನ್ನು ಬ್ರೇಕ್‌ಡ್ಯಾನ್ಸ್ ಹಾಗೂ ರಿಯಾಲಿಟಿ ಶೋಗಳಿಗೆ ಕಳಿಸಿ ಸಂತಸ ಪಡುತ್ತಿರುವುದು ದುರಂತ. ಇದಕ್ಕೆ ವ್ಯತಿರಿಕ್ತವಾಗಿ ವಿದೇಶಗಳಲ್ಲಿ ಭಾರತೀಯ ಸಂಸ್ಕೃತಿ ಮತ್ತು ನೃತ್ಯವನ್ನು ಅಳವಡಿಸಿ ಕೊಳ್ಳಲಾಗುತ್ತಿದೆ. ನಾವು ನಮ್ಮನ್ನು ಕಳೆದುಕೊಳ್ಳುವ ಮುನ್ನಾ ಎಚ್ಚೆತ್ತುಕೊಳ್ಳಬೇಕಿದೆ.

–ಶ್ರೀನಿವಾಸ ಜಿ.ಕಪ್ಪಣ್ಣ, (ಉದ್ಘಾಟನಾ ಭಾಷಣದಲ್ಲಿ)

# ಹೊಸ ಹೆಸರು, ಹೊಸ ಕನಸು...

(ಹಿಂದಿನ ಪುಟದಿಂದ)

ಈ ಕನಸುಗಳು ವಾರ್ತಾಪತ್ರದಲ್ಲಿ ಪ್ರಕಟವಾಗುವ ವಿವಿಧ ಅಂಕಣಗಳಲ್ಲಿ, ಲೇಖನಗಳಲ್ಲಿ, ವರದಿಗಳಲ್ಲಿ, ಛಾಯಾಚಿತ್ರಗಳಲ್ಲಿ ಒಟ್ಟಾರೆ ವಿನ್ಯಾಸದಲ್ಲಿ ಮತ್ತು ಇವುಗಳಲ್ಲಿನ ನಿರಂತರ ಪ್ರಯೋಗಶೀಲತೆಯಲ್ಲಿ ನೀವು ಗಮನಿಸಿರುತ್ತೀರಿ. ಇಂತಹ ಇನ್ನೊಂದು ಕನಸಿದ್ದುದು ವಾರ್ತಾಪತ್ರಕ್ಕೆ ಒಂದು ಆಕರ್ಷಕವಾದ ಹೆಸರನ್ನು ಇಡಬೇಕು ಎಂಬುದು. ಹಲವು ದಿನಗಳ ಚಿಂತನ ಮಂಥನದ ನಂತರ ಮೂಡಿದ್ದು "ನವಿಲು ಹೆಜ್ಜೆ" ಎಂಬ ಹೆಸರು. ಈ ಹೆಸರಿಗೊಂದು ಹಿನ್ನೆಲೆಯಿದೆ.




ನಮಗೆ ಗೊತ್ತಿರುವಂತೆ ನಮ್ಮ ಕರ್ನಾಟಕ ಸಂಘದ ಲಾಂಛನ ನವಿಲು. ಇದನ್ನು ರೂಪಿಸಿದವರು ನವೋದಯದ ಮುಖ್ಯ ಕತೆಗಾರರಲ್ಲೊಬ್ಬರಾದ ಆನಂದ ಎಂಬ ಕಾವ್ಯನಾಮದಿಂದ ಬರೆಯುತ್ತಿದ್ದ ಅಜ್ಜಂಪುರ ಸೀತಾರಾಮ ಅವರು. ಸಾಹಿತ್ಯ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳ ಮೂಲಕ ಬದುಕಿನ ರಾಗ,ಲಯ,ಉತ್ಸಾಹ,ಸಂಭ್ರಮಗಳನ್ನು ಅಭಿವ್ಯಕ್ತಪಡಿಸುವ ಕರ್ನಾಟಕ ಸಂಘ ತನ್ನ ಸೌಂದರ್ಯ ಮತ್ತು ಚೈತನ್ಯಶೀಲ ನೃತ್ಯದಲ್ಲಿ ಇವುಗಳನ್ನೇ ಸಂಕೇತಿಸುವ ಆಕರ್ಷಕ ನವಿಲನ್ನು ಆನಂದ ಅವರು ಲಾಂಛನವಾಗಿ ರೂಪಿಸಿದ್ದು ಅರ್ಥಪೂರ್ಣವಾಗಿದೆ. ನಮ್ಮ ಸಂಘದ ಲಾಂಛನವನ್ನೇ ಮೂಲವಾಗಿಟ್ಟುಕೊಂಡು ಸಂಘದ ಹೆಜ್ಜೆಗುರುತುಗಳನ್ನು ದಾಖಲಿಸುವ ವಾರ್ತಾಪತ್ರಕ್ಕೆ "ನವಿಲು ಹೆಜ್ಜೆ" ಎಂದು ಹೆಸರಿಡಬಹುದೆಂದು ಸಂಘದ ಅಧ್ಯಕ್ಷರು,ಕಾರ್ಯದರ್ಶಿಗಳು ಮತ್ತು ಪದಾಧಿಕಾರಿಗಳಲ್ಲಿ ಚರ್ಚಿಸಿದಾಗ ಅವರೆಲ್ಲ ಖುಷಿಯಿಂದ ತಮ್ಮ ಸಹಮತವನ್ನು ಸೂಚಿಸಿದರು. ನೂತನ ಹೆಸರಿನ ಪತ್ರಿಕೆಯ ಶಿರೋನಾಮೆಯ ಹಲವು ವಿನ್ಯಾಸದ ಮಾದರಿಗಳನ್ನು ಕಲಾವಿದರಾದ ಕೆ.ಪ್ರಭಾಕರ್ ಮಾಡಿಕೊಟ್ಟರು. ಇವು ಒಂದಕ್ಕಿಂತ ಒಂದು ಉತ್ತಮವಾಗಿದ್ದು ಆಯ್ಕೆಯೇ ಕಷ್ಟವಾಯಿತು. "ನವಿಲು ಹೆಜ್ಜೆ" ಯ ಸಂಪಾದಕನಾಗಿ ಇವರೆಲ್ಲರಿಗೂ ನಾನು ಅಭಾರಿಯಾಗಿದ್ದೇನೆ. ಮುಖ್ಯವಾಗಿ ನಿಮಗೆ ಏನನ್ನಿಸಿತು? ಆ ಬಗ್ಗೆ ನನಗೆ ಕುತೂಹಲವಿದೆ.

ಕರ್ನಾಟಕದ ಪ್ರತಿಭಾವಂತ ಲೇಖಕ–ಲೇಖಕಿಯರು ಕರ್ನಾಟಕ ಸಂಘದ ಪ್ರತಿಷ್ಠಿತ ಪ್ರಶಸ್ತಿ ಸ್ವೀಕರಿಸುತ್ತಿರುವ ಸಂದರ್ಭದಲ್ಲಿ ಎರಡು ತ್ರೈಮಾಸಿಕಗಳು ವಿಶೇಷ ಸಂಚಿಕೆಯಾಗಿ ಒಟ್ಟಿಗೆ ಬರುತ್ತಿದೆ. "ನವಿಲು ಹೆಜ್ಜೆ" ಯ ಮೂಲಕ ಅವರೆಲ್ಲರಿಗೆ ಸಂಘದ ಕಾರ್ಯಕ್ರಮಗಳ ಒಂದು ಸಮಗ್ರ ನೋಟವೂ ಸಿಗಲಿ ಎಂಬ ಉದ್ದೇಶವೂ ಇದರ ಹಿಂದಿದೆ.

–ಹರಳಿಮಠ



ಒಣಗಿದ ಕಾಡಿನ ಕಲ್ಲಿನ ಕೋಡೊಳು ಚಿಲುಮೆಯು ಚಿಮ್ಮುವೊಲು।
ಯೋಗಿಯ ಮನಸಿನ ಮೌನ ಶೂನ್ಯದಲಿ ಮಣಿಪ್ರಭೆ ಹೊಮ್ಮುವೊಲು॥
–ಎಚ್.ಎಸ್.ಶಿವಪ್ರಕಾಶ್





# ಮಾಧ್ಯಮಗಳು ಸತ್ಯ ಹೇಳಬೇಕು




ದಿನಾಂಕ:೧೧.೦೧.೨೦೧೪ರಂದು ಹಮ್ಮಿಕೊಂಡ 'ತಿಂಗಳ ಅತಿಥಿ' ಕಾರ್ಯಕ್ರಮದಲ್ಲಿ ಹಿರಿಯ ಪತ್ರಕರ್ತ ಶರತ್ ಕಲ್ಕೋಡ್ 'ಮಾಧ್ಯಮ-ಉದ್ಯಮ' ವಿಚಾರ ಕುರಿತು ಉಪನ್ಯಾಸ ನೀಡಿದರು. ಕಾರ್ಯಕ್ರಮ ನಿರೂಪಿಸಿದ ಪ್ರೊ.ಕೆ.ಜಿ.ವೆಂಕಟೇಶ್, ಅಧ್ಯಕ್ಷತೆ ವಹಿಸಿದ್ದ ಡಾ. ತೀ.ನಂ.ಶಂಕರನಾರಾಯಣ ಮತ್ತು ಸ್ವಾಗತ ಕೋರಿದ ಡಾ. ಎಚ್.ಎಸ್. ನಾಗಭೂಷಣ ಅವರು ಚಿತ್ರದಲ್ಲಿದ್ದಾರೆ. ಈ ಕಾರ್ಯಕ್ರಮದ ಆರಂಭಗೀತೆಯನ್ನು ಸುಜಿತಾ ಬಿ. ಅವರು ಹಾಡಿದರು.

**● ಶರತ್ ಕಲ್ಕೋಡ್**

ಸ್ವಾತಂತ್ರ್ಯಕ್ಕಾಗಿ ಹಂಬಲ, ಸ್ವಾಭಿಮಾನದ ಸಂಕೇತ, ಭಾಷೆ-ಸಾಹಿತ್ಯಗಳ ಬೆಳವಣಿಗೆಗೆ ಪೂರಕವಾಗಿದ್ದ ಮಾಧ್ಯಮ ಇಂದು ಟಿ.ಆರ್.ಪಿ. ಮತ್ತು ಆರ್ಥಿಕ ಒತ್ತಡದಿಂದ ವಿಚಿತ್ರವಾದ ಸನ್ನಿವೇಶದಲ್ಲಿ ಸಿಕ್ಕಿಹಾಕಿಕೊಂಡಿದೆ. ಮಾಧ್ಯಮ, ಉದ್ಯಮವಾಗಿ ರೂಪುಗೊಂಡಿದ್ದರಿಂದ ಅತಿರಂಜಿತ ಸುದ್ದಿ, ಸತ್ಯಕ್ಕೆ ದೂರವಾದ ಸಂಗತಿಗಳು ವಿಜೃಂಭಿಸುತ್ತವೆ. ಅಲ್ಲದೆ, ಅಭಿರುಚಿ ಕೆಟ್ಟು ಹೋಗುತ್ತದೆ. ಇದು ಬಹುದೊಡ್ಡ ಅಪಾಯ. ಇದರ ಮೇಲೆ ನಿಯಂತ್ರಣ ಹೇರುವ ಕೆಲಸವಾಗಬೇಕು. ಸಂಸ್ಕೃತಿ ಮತ್ತು ಜನರ ಅಭಿರುಚಿ ಬದಲಾದಲ್ಲಿ ಸಮಾಜ ಅಧಃಪಥನವಾಗುತ್ತದೆ. ಜೀವಿಸಲು ಅತ್ಯವಶ್ಯಕವಾಗಿರುವ ನೀರು, ಗಾಳಿ, ಬೆಳಕು, ಸಾಂಸ್ಕೃತಿಕ ಸಂಪತ್ತನ್ನು ಮನುಷ್ಯ ತನ್ನ ಸ್ವಾರ್ಥಕ್ಕಾಗಿ ಉದ್ಯಮವಾಗಿ ಪರಿವರ್ತಿಸಿದ್ದಾನೆ. ಗಣಿ ಉದ್ಯಮದಿಂದ ಪ್ರಾಕೃತಿಕ ಸಂಪತ್ತು ನಾಶವಾಗಿದೆ.

ಮಾಧ್ಯಮಗಳು ಸತ್ಯವನ್ನು ಹೇಳಬೇಕು. ಸತ್ಯವನ್ನು ಅತಿರಂಜಿಸಬಾರದು; ಅದಕ್ಕೆ ಬಣ್ಣ ಹಚ್ಚಬಾರದು ಎಂದು ಗಾಂಧೀಜಿ ಅವರು ಹೇಳಿದ್ದು, ಇಂದಿಗೂ ಸಕಾಲಿಕವಾಗಿದೆ. ಟಿ.ವಿ.ಮಾಧ್ಯಮಗಳು ಮತ್ತು ಕೆಲವು ಪತ್ರಿಕೆಗಳು ಇಂದು ತಮ್ಮ ಅಭಿಪ್ರಾಯವನ್ನು ಜನರ ಮೇಲೆ ಹೇರುತ್ತಿವೆ.

ಇಂದಿನ ಉದ್ಯಮವಾದ ಮಾಧ್ಯಮಗಳಿಂದ ಉಪಯೋಗ-ದುರುಪಯೋಗ ಎರಡೂ ಇದೆ. ಆದರೆ, ಅದನ್ನು ಉಪಯೋಗಿಸಿಕೊಳ್ಳುವಲ್ಲಿ ಜಾಣ್ಮೆ ಅಡಗಿದೆ. ಮಕ್ಕಳಲ್ಲಿ ಅಭಿರುಚಿ ಕೆಡದಿರಲು ಮೊಬೈಲ್, ಕಂಪ್ಯೂಟರ್ ಬಳಕೆಗೆ ಕಡಿವಾಣ ಹಾಕಬೇಕು ಟಿ.ವಿ.ಬಗ್ಗೆ ಸದಾ ಎಚ್ಚರ ವಹಿಸಬೇಕು.

(ಉಪನ್ಯಾಸದಿಂದ ಆಯ್ದ ಭಾಗ)

# ಕನ್ನಡ ಭಾಷೆ ಅಳಿದು ಹೋಗಲು ಸಾಧ್ಯವಿಲ್ಲ




ದಿನಾಂಕ ೧೭.೧.೨೦೧೪ರಂದು ಸಂಘವು ಹಮ್ಮಿಕೊಂಡ ಕಾರ್ಯಕ್ರಮದಲ್ಲಿ ಸನ್ಮಾನ ಸ್ವೀಕರಿಸಿದ ನಾಡೋಜ ಪಾಟೀಲ ಪುಟ್ಟಪ್ಪ ಮತ್ತು ಶಿವಮೊಗ್ಗ ಸುಬ್ಬಣ್ಣ ಅವರೊಂದಿಗೆ ಸಂಘದ ಪದಾಧಿಕಾರಿಗಳು.

**● ನಾಡೋಜ ಪಾಟೀಲ ಪುಟ್ಟಪ್ಪ**

ಕನ್ನಡ ಬಹಳ ಪ್ರಾಚೀನವಾದ ಭಾಷೆ, ಕನ್ನಡ ಅಳಿದು ಹೋಗುತ್ತದೆ ಎಂಬುದು ತಪ್ಪು ಕಲ್ಪನೆ. ಆದರೆ, ಈಚೆಗೆ ವಿದ್ಯಾವಂತರೇ ಭಾಷೆಯ ಬಗ್ಗೆ ನಿರ್ಲಕ್ಷ್ಯ ತಾಳಿದ್ದರಿಂದ ಭಾಷಾ ಶಾಸ್ತ್ರಜ್ಞರ ಕೊರತೆ ಅನುಭವಿಸುವಂತಾಗಿದೆ.

ಕನ್ನಡ ಕಣ್ಮರೆಯಾಗುತ್ತದೆ ಎಂಬ ಭಯಪಡುವ ಅಗತ್ಯವಿಲ್ಲ. ಆದರೆ, ನಮ್ಮ ಜನಪ್ರತಿನಿಧಿಗಳು, ಅಧಿಕಾರಿಗಳು ಹಾಗೂ ಕೆಲವು ಸಾಹಿತಿಗಳು ಭಾಷೆಯ ಬಗ್ಗೆ ಗಂಭೀರವಾಗಿಲ್ಲ. ಮಹಾರಾಷ್ಟ್ರ, ಛತ್ತೀಸ್‌ಗಡ, ಪಶ್ಚಿಮ ಬಂಗಾಳ, ಮತ್ತಿತರ ರಾಜ್ಯಗಳಲ್ಲಿಯೂ ಕನ್ನಡದ ಶಾಸನಗಳು ಹಿಂದೆಯೇ ಲಭ್ಯವಾಗಿವೆ. ಹಿಂದೂಸ್ಥಾನಿ ಸಂಗೀತ ಹುಟ್ಟಿದ್ದು, ಕೂಡ ಕರ್ನಾಟಕದಲ್ಲಿಯೇ. ಇಡೀ ದೇಶದಲ್ಲಿ ಕರ್ನಾಟಕದ ಕುರುಹುಗಳಿವೆ.

(ಭಾಷಣದಿಂದ ಆಯ್ದ ಭಾಗ)






ಲೋಕದ ಬರಡನು ಸಿರಿಹಯನಾಗಿಸು ನೊರೆಹಾಲ್ ಕರೆವಂತೆ।
ಕುಣಿಕುಣಿ ಒಣ ಬನ ಹಸುರಿಸಿ ಕುಸುಮಿಸಿ ಗಮಗಮ ಬಿರಿವಂತೆ॥
-ಎಚ್.ಎಸ್.ಶಿವಪ್ರಕಾಶ್






ದಿನಾಂಕ:೧೭.೦೧.೨೦೧೪ರಂದು ೨೦೧೩–೧೪ನೇ ಸಾಲಿನ ದಿ.ರಂಗನಾಯಕಮ್ಮ ಗಣೇಶ್‌ರಾವ್ ದತ್ತಿನಿಧಿ ಸ್ಮಾರಕ ಕನ್ನಡ ಭಾವಗೀತೆ ಗಾಯನ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಗಾಯಕ ಶಿವಮೊಗ್ಗ ಸುಬ್ಬಣ್ಣ ಬಹುಮಾನ ಪ್ರದಾನ ಮಾಡಿದರು. ಪ್ರೌಢಶಾಲಾ ವಿಭಾಗದಲ್ಲಿ ರಾಮಕೃಷ್ಣ ವಿದ್ಯಾನಿಕೇತನ ಪ್ರೌಢಶಾಲೆಯ ವಿಕಾಸ್ ಎನ್.ಕೆ. ಪ್ರಥಮ ಸ್ಥಾನವನ್ನು, ವಿಕಾಸ ಪ್ರೌಢಶಾಲೆಯ ಸುರಕ್ಷಾದಾಸ್ ಮತ್ತು ಸುಷ್ಮಾ ಸಿ.ಆರ್. ಕ್ರಮವಾಗಿ ದ್ವಿತೀಯ ಹಾಗೂ ತೃತೀಯ ಸ್ಥಾನವನ್ನು ಪಡೆದರು. ಜ್ಞಾನದೀಪದ ಪ್ರೌಢಶಾಲೆಯ ಅಚಿಂತ್ಯ ಎಂ.ಡಿ ಹಾಗೂ ಸಂದೀಪಿನಿ ಆಂಗ್ಲ ಮಾಧ್ಯಮ ಪ್ರೌಢಶಾಲೆಯ ವಿಸ್ಮಯ ಎಸ್.ಎನ್. ಸಮಾಧಾನಕರ ಬಹುಮಾನಗಳನ್ನು ಪಡೆದರು. ಪದವಿ ಪೂರ್ವ ಕಾಲೇಜು ವಿಭಾಗದಲ್ಲಿ ಡಿ.ವಿಎಸ್. ಪದವಿ ಪೂರ್ವ ಕಾಲೇಜಿನ ಸ್ವಾತಿ ಜೆ.ಎಸ್. ಪ್ರಥಮ ಸ್ಥಾನವನ್ನು, ಡಿವಿಎಸ್ ಪದವಿ ಪೂರ್ವ (ಸ್ವ) ಕಾಲೇಜಿನ ಭಾರ್ಗವಿ ವಿ. ಎಂ. ದ್ವಿತೀಯ ಸ್ಥಾನವನ್ನು, ಪೇಸ್ ಆಲ್ಟ್ರಾಮಾಡ್ರನ್ ಪದವಿ ಪೂರ್ವ ಕಾಲೇಜಿನ ಭವಾನಿ ಎಸ್.ಎಸ್. ತೃತೀಯ ಸ್ಥಾನ ಪಡೆದರು. ಡಿವಿಎಸ್ ಪದವಿ ಪೂರ್ವ (ಸ್ವ) ಕಾಲೇಜಿನ ಸುಪ್ರಿತಾ ಸಾಮಕ್ ಎನ್.ಕೆ. ಮತ್ತು ಶ್ರೀ ವಿದ್ಯಾಭಾರತಿ ಪದವಿ ಪೂರ್ವ(ಸ್ವ) ಕಾಲೇಜಿನ ನಾಗಶ್ರೀ ಐ.ಎಸ್. ಸಮಾಧಾನಕರ ಬಹುಮಾನ ಪಡೆದರು. ವೇದಿಕೆಯಲ್ಲಿ ಸುಬ್ಬಣ್ಣ ಅವರೊಂದಿಗೆ ಹೆಚ್.ಎನ್. ಶ್ರೀಲಕ್ಷ್ಮೀ, ಎಚ್.ಡಿ. ಉದಯಸಂಕರ ಶಾಸ್ತ್ರಿ, ಡಾ. ಎಚ್/ಎಸ್. ನಾಗಭೂಷಣ ಮತ್ತು ಬಿ.ಟಿ. ಅಂಬಿಕ ಚಿತ್ರದಲ್ಲಿದ್ದಾರೆ.

# 'ಕಲೆ' ನಿಂತ ನೀರಾಗದಿರಲಿ!!

(೨ನೇ ಪುಟದಿಂದ)

ಡಾ॥ ದ.ರಾ. ಬೇಂದ್ರೆ ಕಾವ್ಯ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಡಾ॥ ಸಿದ್ದಲಿಂಗ ಪಟ್ಟಣಶೆಟ್ಟಿಯವರ ಕಾವ್ಯದ ಅನುಸಂಧಾನ ಕುರಿತು ಪ್ರೊ. ಚಂದ್ರಶೇಖರ ವಸ್ತ್ರದ ವಿವರಿಸಿದರು. ತಮ್ಮ ಪ್ರಥಮ ಕಾವ್ಯ ಸಂಕಲನ 'ನೀನಾ' ಮೂಲಕ ಹೊಸಗಾಳಿಯನ್ನು ತಂದ ಡಾ॥ ಪಟ್ಟಣಶೆಟ್ಟಿಯವರು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸಾಧನೆ ಮಾಡಿದ್ದರೂ, ಕಾವ್ಯವೇ ಅವರ ಪ್ರಮುಖ ಅಭಿವ್ಯಕ್ತಿ ಸಾಧನ! ದುರಂತ ಪ್ರೇಮಿಗಳ ಪಾಲಿನ ಬೈಬಲ್ ಎನಿಸಿಕೊಂಡಿರುವ ಅವರ 'ನೀನಾ' ಕವನ ಸಂಕಲನದ ನಂತರದ ವರ್ಷಗಳಲ್ಲಿ ಅವರು ಮತ್ತಷ್ಟು ಮೃದುವಾಗಿದ್ದಾರೆ, ಮಾಗಿದ್ದಾರೆ. ಎಲ್ಲ ಕಡೆಗೂ 'ತಾಯಿತನ'ವನ್ನೇ ಕಾಣುತ್ತಿರುವ ಡಾ॥ ಸಿದ್ಧಲಿಂಗ ಪಟ್ಟಣಶೆಟ್ಟರು ಬೇಂದ್ರೆಯವರ ಕಾವ್ಯ ಪ್ರಯೋಗಗಳ ಕುರಿತು ಮಾತನಾಡಿದರು. ಬೇಂದ್ರೆಯವರ ಆತ್ಮಕಥಾನಕ ರೂಪದ 'ಸಖಿಗೀತೆ' ಯಂತೆ ಪಟ್ಟಣಶೆಟ್ಟಿಯವರ "ಕುಲಾಯಿ ಇರಲಿ ನನ್ನಲ್ಲಿಯೇ" ಕೂಡ ಆತ್ಮಕತೆಯ ಸ್ವರೂಪ ತಾಳಿರುವದು ವಿಶೇಷವೇ! 'ಮನಸು ಶಿಶುವಾಗಬೇಕು' ಎನ್ನುವ ಅವರ ಮಾತು ಧ್ಯಾನ ಯೋಗ್ಯವಾಗಿದೆ.

೨೬.೦೪.೨೦೧೪ರಂದು ಶ್ರೀ ಎಸ್. ದಿವಾಕರ್ 'ಸಣ್ಣ ಕತೆ' ಕುರಿತಾದ ಉಪನ್ಯಾಸ ಕನ್ನಡ ಸಾಹಿತ್ಯದಲ್ಲಿ ನಡೆಯುತ್ತಿರುವ ನೀಳ್ಗತೆ, ಸಣ್ಣಕತೆ, ಹನಿ–ಮಿನಿ ಕತೆ, ಒಂದೇ ಸಾಲಿನ ಕತೆ, ಮುಂತಾದ ಪ್ರಯೋಗಗಳತ್ತ ನಮ್ಮ ಗಮನ ಸೆಳೆಯಿತು. ಜೊತೆ–ಜೊತೆಗೆ ಇತರ ಭಾಷೆಗಳ, ಪಾಶ್ಚಾತ್ಯ ಜಗತ್ತಿನ ಸಣ್ಣ ಕತೆಗಳ ಸ್ವರೂಪದತ್ತಲೂ ಚಿಂತನ ಮಾಡಲು ಪ್ರೇರೇಪಿಸಿತು. ನಮ್ಮ ಭಾರತೀಯರಲ್ಲಿ ಈಗ ಕನ್ನಡ ಸಾಹಿತ್ಯದಲ್ಲಿ ಬಳಕೆಯಲ್ಲಿರುವ ಸಣ್ಣ ಕತೆ ಸ್ವರೂಪಗಳು ಇರಲಿಲ್ಲ. ಇಂಗ್ಲೀಷ್ ಸಾಹಿತ್ಯದ 'ಶಾರ್ಟ್ ಸ್ಟೋರಿ'ಗೆ ಸಂವಾದಿಯಾಗಿ ಸಣ್ಣ ಕತೆಗಳು ಮೂಡಿ ಬಂದಿವೆ. ಎರಡೇ ಸಾಲಿನ ಅತಿ ಸಣ್ಣ ಕತೆಯಲ್ಲಿ ಏನೆಲ್ಲವೂ ಇರಬಹುದು ಎಂಬುದನ್ನು ಸೋದಾಹರಣ ಸಮೇತವಾಗಿ ಶ್ರೀ ದಿವಾಕರ ವಿವರಿಸಿದರು.

ಈ ಎಲ್ಲ ಕಾರ್ಯಕ್ರಮಗಳು ವಿಭಿನ್ನವಾಗಿದ್ದರೂ, ಅಂತರ್ಗತವಾದ ಒಂದು ಸಂಬಂಧವನ್ನು, ಸೂತ್ರವನ್ನು ಗಮನಿಸಬಹುದು. ಕಲೆ, ಸಾಹಿತ್ಯದಲ್ಲಿ ಹೊಸಗಾಳಿ, ಹೊಸನೀರು ಬರಲೇಬೇಕು. ಪ್ರಕೃತಿಯಂತೆ ಕಲೆ, ಸಾಹಿತ್ಯವೂ ಕೂಡ ನವನವೋನ್ಮೇಶಶಾಲಿಯಾಗಿದ್ದರೇನೇ ಉಳಿಯಲು, ಬೆಳೆಯಲು ಸಾಧ್ಯ, ಅಲ್ಲವೇ? ◆



ತುಳಿ ತುಳಿ ನೆಲವನು ಆಳದ ಜೀವವು ಮೇಲಕೆ ಪುಟಿವಂತೆ।
ಬೇರಲಿ ತುಂಬಿದ ಸಾರವು ಉಕ್ಕುತ ಬಣ್ಣಗಳೊಡೆವಂತೆ॥
–ಎಚ್.ಎಸ್.ಶಿವಪ್ರಕಾಶ್





# ಜಿ.ಎಸ್.ಎಸ್. ಕವನಗಳು ಕಾಲಕ್ಕೆ ಹಿಡಿದ ಕನ್ನಡಿ

● ಡಾ. ಎಚ್.ಎಸ್. ರಾಘವೇಂದ್ರರಾವ್




ದಿನಾಂಕ: ೧೮.೦೧.೨೦೧೪ರಂದು ಹಮ್ಮಿಕೊಂಡಿದ್ದ ಜಿ.ಎಸ್.ಎಸ್. ನಮನ ಕಾರ್ಯಕ್ರಮದಲ್ಲಿ ಡಾ. ಎಚ್.ಎಸ್.ರಾಘವೇಂದ್ರರಾವ್ ಅವರು ಉಪನ್ಯಾಸ ನೀಡಿದರು. ಎಚ್.ಡಿ.ಉದಯಶಂಕರಶಾಸ್ತ್ರಿ, ಶಿವಮೊಗ್ಗ ಸುಬ್ಬಣ್ಣ, ಡಾ. ತೀ. ನಂ. ಶಂಕರನಾರಾಯಣ, ಹೆಚ್.ಎನ್.ಶ್ರೀಲಕ್ಷ್ಮಿ ಮತ್ತು ಆಶಾಲತಾ ಉಪಸ್ಥಿತರಿದ್ದರು. ಗುರುಗುಹ ಸಂಗೀತ ವಿದ್ಯಾಲಯದ ವಿದ್ಯಾರ್ಥಿಗಳು ಜಿ.ಎಸ್.ಎಸ್. ಕವನಗಳನ್ನು ವಾಚಿಸಿದರು.

ಜಿ.ಎಸ್.ಎಸ್. ಅವರ ಕವಿತೆಗಳು ನಮ್ಮ ಹೃದಯದ ತಲ್ಲಣಗಳಿಗೆ ಹಿಡಿದ ಕನ್ನಡಿಯಂತಿದೆ. ಇಲ್ಲಿನ ಮಾನವೀಯ, ಗುಣ, ಭಾವೈಕ್ಯತೆಯ ಸಂದೇಶ, ಸಮಕಾಲೀನ ವಸ್ತುಸ್ಥಿತಿಯ ಬಿಂಬ ಅನನ್ಯವಾಗಿದೆ.

ಜಿ.ಎಸ್.ಎಸ್. ಎಂದೂ ವಿವಾದಕ್ಕೆ ಒಳಗಾಗಲಿಲ್ಲ. ವಿವಾದಾತೀತರಾಗಿದ್ದುಕೊಂಡೇ ಹೇಳಬೇಕಾದುದ್ದನ್ನು ಹೇಳಿದರು. ಅವರು ಯಾರನ್ನು ಕುರಿತು ಕವನ ರಚಿಸಿದರೋ ಅದು ಅವರನ್ನು ಸ್ಪಷ್ಟವಾಗಿ ತಲುಪಿತು. ಅವರ ಕವಿತೆಯ ಶ್ರೇಷ್ಠತೆ ಹಾಗೂ ಸಾರ್ಥಕತೆ ಅಡಕವಾಗಿರುವುದೇ ಅಲ್ಲ.

ಶಿವರುದ್ರಪ್ಪ ಅವರ ಕವಿತೆಗಳು ಆಯಾ ಕಾಲಘಟ್ಟಕ್ಕೆ ಹಿಡಿದ ಕನ್ನಡಿ. ನಮ್ಮೊಳಗಿನ ಭಾವನೆಗಳು ಅವರು ಕವಿತೆಯನ್ನಾಗಿಸಿದರು. ನಾವು ಬರೆಯಬೇಕು ಅಂದುಕೊಂಡಿದ್ದನ್ನು ಅವರು ಸಾಹಿತ್ಯ ರೂಪಕ್ಕೆ ಇಳಿಸಿದರು. ಅವರು ಪ್ರಭಾವದಿಂದ ವಿಜ್ಞಾನ ವಿದ್ಯಾರ್ಥಿಯಾಗಿದ್ದ ನಾನು ಸಾಹಿತ್ಯದ ವಿದ್ಯಾರ್ಥಿಯಾದೆ. ಹೀಗೆ ಅನೇಕರ ಬದುಕನ್ನು ಬದಲಿಸಿದ್ದು ಜಿ.ಎಸ್.ಎಸ್. ಹೆಗ್ಗಳಿಕೆ. ಕವಿತೆ ಮೂಲಕ ಆದರ್ಶ ಹಾಗೂ ಮಾನವತಾವಾದವನ್ನು ಜಿ.ಎಸ್.ಎಸ್. ಬಿತ್ತಿದರು. ಕವಿತೆಯ ಹೃದಯದಲ್ಲಿ ಮನಸ್ಸು ಹಾಗೂ ಸಮುದಾಯ ಎಲ್ಲವೂ ಇವೆ ಎಂಬುದನ್ನು ಅವರು ನಿರೂಪಿಸಿದರು. ಆ ಮೂಲಕ ಕನ್ನಡ ಸಂಸ್ಕೃತ ಬೆಳೆಸುವಲ್ಲಿ ವಿಶಿಷ್ಟ ಕಾರ್ಯಕ್ಕೈಗೊಂಡರು.

ನನ್ನ ಶಿಷ್ಯರೂ ನನ್ನಂತೆಯೇ ಬರೆಯಬೇಕು, ಬದುಕಬೇಕು, ಚಿಂತಿಸಬೇಕೆಂಬ, ಅವರು ಬಯಸಲಿಲ್ಲ. ಇದೇ ಕಾರಣಕ್ಕೆ ಉತ್ತಮ ಗುರು ಎನಿಸಿಕೊಂಡರು.

ಜಿ.ಎಸ್.ಎಸ್. ನಮ್ಮ ಕಾಲದ ಆರೋಗ್ಯವಂತ ಲೇಖಕ. ಅವರು ನಿಸರ್ಗ ಮತ್ತು ಮನುಷ್ಯನನ್ನು ಒಂದೇ ಎಂದು ಭಾವಿಸಿದ್ದರು.◆




ಗುರುಗುಹ ಸಂಗೀತ ವಿದ್ಯಾಲಯದ ವಿದ್ಯಾರ್ಥಿಗಳು ಜಿ.ಎಸ್.ಎಸ್. ಕವನಗಳನ್ನು ವಾಚಿಸಿದರು.

ಎಸ್.ವಿ.ಟಿ. ನಮನ

# ಜನಮಾನಸದಲ್ಲಿ ತಿಮ್ಮಯ್ಯ ಶಾಶ್ವತ

## ಅಗಲಿದ ಅಧ್ಯಕ್ಷರಿಗೆ ಕಂಬನಿ....... ನುಡಿನಮನ



ಆಕಸ್ಮಿಕ ಅಪಘಾತದಲ್ಲಿ ಅಗಲಿದ ನಮ್ಮ ಸಂಘದ ಅಧ್ಯಕ್ಷರಾದ ಶ್ರೀ ಎಸ್.ವಿ.ತಿಮ್ಮಯ್ಯ ಅವರಿಗೆ ದಿನಾಂಕ:೨೨.೦೧.೨೦೧೪ರಂದು ಕರ್ನಾಟಕ ಸಂಘವು ನುಡಿನಮನ ಕಾರ್ಯಕ್ರಮ ಏರ್ಪಡಿಸಿತ್ತು.ಅಲ್ಲಿ ಗಣ್ಯರು ಸಲ್ಲಿಸಿದ ನುಡಿನಮನ ಇಲ್ಲಿದೆ.

"ಕಲೆ, ಸಾಹಿತ್ಯ ಮತ್ತು ಸಂಸ್ಕೃತಿ ಬಗ್ಗೆ ಎಸ್.ವಿ.ಟಿ. ಅವರಿಗೆ ವಿಶೇಷ ಆಸಕ್ತಿ ಇತ್ತು. ಶಾಲಾ/ಕಾಲೇಜು ವಿದ್ಯಾರ್ಥಿಗಳಿಗೆ ಗಮಕ ಕಲೆಯ ಅರಿವು ಮೂಡಿಸುವಲ್ಲಿ ತಿಮ್ಮಯ್ಯ ಅವರ ಪಾತ್ರ ಹಿರಿದು"

**-ರಾಜರಾಮಮೂರ್ತಿ, ಕಾರ್ಯಾಧ್ಯಕ್ಷರು, ಜಿಲ್ಲಾ ಗಮಕ ಪರಿಷತ್.**

"ಒಬ್ಬ ಅಪರೂಪದ ವ್ಯಕ್ತಿಯನ್ನು ಕಳೆದುಕೊಂಡಿದ್ದೇವೆ. ಸಮಾಜಕ್ಕೆ ಅಪಾರ ನಷ್ಟವಾಗಿದ್ದು, ಅಂತಹ ವ್ಯಕ್ತಿಯನ್ನು ಮತ್ತೆ ಪಡೆಯುವುದು ಕಷ್ಟ. ಎನ್.ಇ.ಎಸ್. ಶಿಕ್ಷಣ ಸಂಸ್ಥೆಯನ್ನು ಹೆಮ್ಮರವಾಗಿ ಬೆಳೆಸುವಲ್ಲಿ ತಿಮ್ಮಯ್ಯ ಅವರ ಪಾತ್ರ ಹಿರಿದು. ಹೆಸರಿಗೆ ಮತ್ತು ಪ್ರಚಾರಕ್ಕಾಗಿ ತಿಮ್ಮಯ್ಯ ಯಾವುದೇ ಕ್ಷೇತ್ರದಲ್ಲಿ ತೊಡಗಿಸಿಕೊಂಡವರಲ್ಲ. ಕಾರ್ಯನಿರ್ವಹಿಸಿದ ಎಲ್ಲಾ ಕ್ಷೇತ್ರಗಳಲ್ಲೂ ವಿಶಿಷ್ಟ ಕೊಡುಗೆ ಮೂಲಕ ತಮ್ಮ ಛಾಪು ಮೂಡಿಸಿದ್ದಾರೆ. ಭೌತಿಕವಾಗಿ ಇಲ್ಲದಿದ್ದರೂ ಅವರು ಮಾಡಿದ ವಿಶಿಷ್ಟ ಸಮಾಜ ಸೇವಾ ಕಾರ್ಯಗಳಿಂದ ಇಂದಿಗೂ ಜನಮಾನಸದಲ್ಲಿ ಶಾಶ್ವತವಾಗಿ ನೆಲೆಸಿದ್ದಾರೆ."

**-ಡಾ. ಪಿ.ನಾರಾಯಣ್, ನಿರ್ದೇಶಕರು,**
**ರಾಷ್ಟ್ರೀಯ ಶಿಕ್ಷಣ ಸಮಿತಿ, ಶಿವಮೊಗ್ಗ**

"ಸಮಾಜದ ಪ್ರಮುಖ ಆಗುಹೋಗುಗಳಿಗೆ ಎಸ್.ವಿ.ಟಿ. ಅಭಿಭಾಜ್ಯ ಅಂಗವಾಗಿದ್ದರು. ಒತ್ತಡದ ಕೆಲಸ ಅವರ ಪುಸ್ತಕ ಅಧ್ಯಯನಕ್ಕೆ ಎಂದೂ ತೊಡಕಾಗಲಿಲ್ಲ. ಭಾಷಣದಲ್ಲಿ ವಿವರಿಸುತ್ತಿದ್ದ ಸಂಗತಿಗಳು ಮತ್ತು ಭಾಷಾ ಪ್ರೌಢಿಮೆ ಎಂತಹವರನ್ನೂ ಚಕಿತಗೊಳಿಸುತ್ತಿತ್ತು. ಯಾವುದೇ ನಿರ್ದಿಷ್ಟ ತತ್ವಕ್ಕೆ ಜೋತು ಬೀಳದೆ ಎಲ್ಲದನ್ನೂ ಸಮಾನವಾಗಿ ಕಾಣುವ ಅವರ ವಿಶಿಷ್ಟ ಗುಣ ಆದರ್ಶ ಪ್ರಾಯವಾದುದು".

**-ಡಾ.ಎಚ್.ಎಸ್.ನಾಗಭೂಷಣ್, ಗೌರವ ಕಾರ್ಯದರ್ಶಿ, ಕರ್ನಾಟಕ ಸಂಘ,**




ದಿನಾಂಕ: ೨೧.೦೧.೨೦೧೪ ರಂದು ಎಸ್.ವಿ.ಟಿ. ನಮನ ಶ್ರದ್ಧಾಂಜಲಿ ಕಾರ್ಯಕ್ರಮ ದಲ್ಲಿ ಡಾ.ಪಿ. ನಾರಾಯಣ್ ಮಾತನಾಡಿದರು. ಇವರೊಂದಿಗೆ ಕೆ.ಜಿ. ಸುಬ್ರಹ್ಮಣ್ಯ, ಡಾ.ಅರವಿಂದ್, ರಾಜಾರಾಮ ಮೂರ್ತಿ, ಡಾ.ಎಚ್. ಎಸ್.ನಾಗಭೂಷಣ, ವೈದ್ಯ ಅವರು ತಿಮ್ಮಯ್ಯ ಅವರಿಗೆ ನುಡಿನಮನ ಸಲ್ಲಿಸಿದರು



ಇರುಳಿಳಿದಿದೆ ಕನಸಿಳಿದಿದೆ ನಿದ್ರಿಸುವೀ ಭುವಿಗೆ ಚಂದ್ರೋದಯ ಬಂದಾಗಿದೆ ಕಾರಿರುಳಿನ ವನಕೆ॥
ಕಣ್ಮಿಟುಕಿಸಿ ನಕ್ಷತ್ರ ಈಕ್ಷಿಸಿದವು ಇರುಳ ಮಂಗಳಮಯ ತಂಗಾಳಿಗಳಾಲಂಗಿಸೆ ಕಡಲ॥
-ಎಚ್.ಎಸ್.ಶಿವಪ್ರಕಾಶ್





# ಟಿ.ಆರ್.ಪಿಯಲ್ಲ, ಮಾಧ್ಯಮಕ್ಕೆ ವಿಶ್ವಾಸಾರ್ಹತೆ ಮುಖ್ಯ

• ವಿಶ್ವೇಶ್ವರ ಭಟ್




ಮಾಧ್ಯಮಗಳು ಮನಸ್ಸು ಮಾಡಿದರೆ ಯಾವುದೇ ಒಂದು ಅಂಶವನ್ನು ಸದೃಢವಾಗಿ ಕಟ್ಟಬಹುದು ಅಥವಾ ಕೆಡವಬಹುದು. ಪತ್ರಿಕೆಗಳಿಂದಲೇ ಕ್ರಾಂತಿಯಾಗಿದ್ದನ್ನು ಮತ್ತು ಅಮೂಲಾಗ್ರ ಬದಲಾವಣೆಯಾದುದ್ದನ್ನು ಇತಿಹಾಸದಲ್ಲಿ ನೋಡಬಹುದು. ಪತ್ರಿಕೆ ಅಥವಾ ಟಿವಿಗೆ ಪ್ರಸಾರ ಟಿ.ಆರ್.ಪಿ.ಗಿಂತ ವಿಶ್ವಾಸಾರ್ಹತೆಗೆ ದೊಡ್ಡ ಮಾನದಂಡವಾಗಬೇಕು. ಇಂದು ಟಿವಿಗಳಲ್ಲಿ ಕೀಳು ಅಭಿರುಚಿಯ ಸೆನ್ಸೇಷನಲ್ ಸುದ್ದಿಗಳನ್ನು ತೋರಿಸದಿದ್ದರೆ ಟಿ. ಆರ್.ಪಿ. ಸಿಗುವುದೇ ಇಲ್ಲ ಎಂಬ ಪರಿಸ್ಥಿತಿ ಉದ್ಭವಿಸಿದೆ. ಒಳ್ಳೆಯ ಕಾರ್ಯಕ್ರಮಗಳನ್ನು ನೋಡುವವರಿಲ್ಲ. ಗಂಡ–ಹೆಂಡತಿ ಜಗಳವನ್ನು ತೋರಿಸಬೇಕು ಎನ್ನುವ ಉದ್ದೇಶ ಯಾರಿಗೂ ಇರುವುದಿಲ್ಲ. ಆದರೆ, ಒಳ್ಳೆಯ ಕಾರ್ಯಕ್ರಮಗಳನ್ನು ಕೊಟ್ಟಾಗ ಜನರು ಸ್ವೀಕರಿಸದಿದ್ದರೆ ಏನು ಮಾಡಬೇಕು ಎಂಬ ಪ್ರಶ್ನೆ ಉದ್ಭವಿಸುತ್ತದೆ.

ದಿನಾಂಕ: ೨೨.೦೨. ೨೦೧೪ ರಂದು ನಡೆದ ತಿಂಗಳ ಅತಿಥಿ ಕಾರ್ಯ ಕ್ರಮದಲ್ಲಿ ಪತ್ರಕರ್ತರಾದ ವಿಶ್ವೇಶ್ವರಭಟ್ಟ ಅವರು ಪತ್ರಿಕೋದ್ಯಮ ವಿಚಾರವಾಗಿ ಉಪನ್ಯಾಸ ನೀಡಿದರು. ಕಾರ್ಯಕ್ರಮ ನಿರೂಪಿಸಿದ ಪ್ರೊ. ಕೆ.ಜಿ.ವೆಂಕಟೇಶ್, ಅಧ್ಯಕ್ಷತೆ ವಹಿಸಿದ್ದ ಶ್ರೀಮತಿ ವಿಜಯಾಶ್ರೀಧರ್, ಸ್ವಾಗತ ಕೋರಿದ ಡಾ. ಎಚ್.ಎಸ್. ನಾಗಭೂಷಣ ಚಿತ್ರದಲ್ಲಿ ದ್ದಾರೆ. ಈ ಕಾರ್ಯಕ್ರಮದಲ್ಲಿ ಸಹನಾ ಭಾರದ್ವಾಜ್ ಆರಂಭಗೀತೆ ಹಾಡಿದರು.



ಸಹಚೇತನ ನಾಟ್ಯಾಲಯ ತಂಡವು ಕರ್ನಾಟಕ ಸಂಘದ ಸಹಯೋಗದಲ್ಲಿ 'ವರ್ಷದ ಹರ್ಷ' ಎಂಬ ನೃತ್ಯ ಕಾರ್ಯಕ್ರಮದಲ್ಲಿ ಇಂಗ್ಲೆಂಡಿನ ದೇವಿಕಾ ನೃತ್ಯ ತರಂಗ ಕಲಾವಿದರ ಒಂದು ಝಲಕ್.

**ಮಾರ್ಚ್ ಮಾಸದ ತಿಂಗಳ ಅತಿಥಿ**

# ರಂಗಕರ್ಮಿಯ ಬದುಕು ಸ್ವಚ್ಛವಾಗಿರಬೇಕು

• **ಮಾಸ್ಟರ್ ಹಿರಣ್ಣಯ್ಯ**



ರಂಗಭೂಮಿಯಿಂದ ಸಮಾಜದಲ್ಲಿ ಪರಿವರ್ತನೆ ಸಾಧ್ಯ. ಆದರೆ, ರಂಗಕರ್ಮಿಯ ಬದುಕು ಸ್ವಚ್ಛವಾಗಿ ರಬೇಕು. ಸಾರ್ವತ್ರಿಕವಾಗಿ ಬೈಯ್ದು, ಯಾರಿಗೂ ಗೊತ್ತಾಗದಂತೆ ಬಿಕ್ಷೆ ಬೇಡಿ ಹೊಂದಾಣಿಕೆ ಮಾಡಿಕೊಂಡರೆ ನಮಗೆ ಯಾರನ್ನೂ ಟೀಕಿಸುವ ನೈತಿಕತೆ ಬರುವುದಿಲ್ಲ. ಬೇರೊಬ್ಬರನ್ನು ವಿಡಂಬನೆ ಅಥವಾ ಟೀಕಿಸುವ ವ್ಯಕ್ತಿಯು ಬದುಕು ಪಾರದರ್ಶಕ ವಾಗಿರಬೇಕು.

ಹಾಸ್ಯ ಆರೋಗ್ಯಕ್ಕೆ ಪೂರಕ. ಆದರೆ, ಪರಿಹಾಸ್ಯ ಹಾಗೂ ಅಪಹಾಸ್ಯ ಸರಿಯಲ್ಲ. ಅದನ್ನು ಯಾವತ್ತೂ ಮಾಡಬಾರದು. ಈ ನಿಟ್ಟಿನಲ್ಲಿ ತಿಳಿ ಹಾಸ್ಯ ಹೆಚ್ಚು ಸೂಕ್ತವಾಗಿದ್ದು, ಪೂರಕವಾದ ವಿಷಯವನ್ನಿಟ್ಟುಕೊಂಡು ಸಮಾಜಕ್ಕೆ ಉತ್ತಮ ಸಂದೇಶ ನೀಡಬಹುದು. ತಿಳಿಹಾಸ್ಯದಿಂದ ಯಾರಿಗೂ ನೋವಾಗುವುದಿಲ್ಲ. ಬದಲಿಗೆ ಆ ಕ್ಷಣಕ್ಕೆ ನಕ್ಕು ಬಿಡಬಹುದಾದಂತಹ ಅದಕ್ಕೆ ಹೆಚ್ಚಿನ ಅರ್ಥ ಕಲ್ಪಿಸಬಾರದು.

ತೆನಾಲಿ ರಾಮಕೃಷ್ಣ ಈ ದೇಶ ಕಂಡ ಅತ್ಯುತ್ತಮ ವಿಡಂಬನಕಾರ. ತನ್ನ ಸ್ಥಾನಮಾನದ ಇತಿಮಿತಿಯಲ್ಲೇ ರಾಜನಿಗೆ ಅರ್ಥವಾಗುವ ಹಾಗೆ ಮೊನಚು ಮಾತಿನಲ್ಲೇ ಚುಚ್ಚುತ್ತಿದ್ದ. ಹಾಗೆಯೇ ಬಸವಣ್ಣ ಸಹ ನುಡಿದರೆ ಮುತ್ತಿನ ಹಾರದಂತಿರಬೇಕು, ಮಾಣಿಕ್ಯದ ದೀಪ್ತಿಯಂತಿರಬೇಕು ಸ್ಪಟಿಕದ ಸಲಾಕೆಯಂತಿರಬೇಕು, ಲಿಂಗಮೆಚ್ಚಿ ಅಹುದಹುದೆನ್ನಬೇಕು ಎಂಬ ವಚನದಲ್ಲಿ ಮಾತಿನ ಮಹತ್ವ ಇದೆ. ಇದೇ ಸಾಲಿನಲ್ಲಿ ಬೀಚಿ, ಟಿ.ಪಿ. ಕೈಲಾಸಂ, ನಾಗೇರಿ ಕೃಷ್ಣರಾಯ ನಿಲ್ಲುತ್ತಾರೆ.

ಪೌರಾಣಿಕ ಹಾಗೂ ಐತಿಹಾಸಿಕ ನಾಟಕ ಮಾಡುವಾಗ ಪಾತ್ರಕ್ಕೆ ತಕ್ಕಂತೆ ನಟರನ್ನು ಕರೆತರಬೇಕು. ಆದರೆ, ಸಾಮಾಜಿಕ ನಾಟಕ ಹಾಗಲ್ಲ. ಲಭ್ಯವಿರುವ ಸಂಪನ್ಮೂಲ ಹಾಗೂ ಕಲಾವಿದರನ್ನು ಬಳಸಿಕೊಂಡು ನಾಟಕ ಆಡಬಹುದು. ಈ ಕಾರಣಕ್ಕಾಗಿಯೇ ನಾನು ಸಾಮಾಜಿಕ ನಾಟಕಗಳತ್ತ ಹೆಚ್ಚು ಆಕರ್ಷಕನಾದೆ.

**(ದಿನಾಂಕ: ೨೦.೦೩.೨೦೧೪ ಮಾರ್ಚ್ ಮಾಸದ ತಿಂಗಳ ಅತಿಥಿ ಕಾರ್ಯಕ್ರಮದಲ್ಲಿ ರಂಗಕರ್ಮಿ ಮಾಸ್ಟರ್ ಹಿರಣ್ಣಯ್ಯ ಅವರು ಉಪನ್ಯಾಸ ನೀಡಿದರು. ಡಾ.ಗುರುದತ್ ಕಾರ್ಯಕ್ರಮ ನಿರೂಪಿಸಿದರು. ವಿಜಯಶ್ರೀಧರ್ ಅಧ್ಯಕ್ಷತೆ ವಹಿಸಿದ್ದರು. ಡಾ.ಎಚ್.ಎಸ್.ನಾಗಭೂಷಣ ಸ್ವಾಗತಿಸಿದರು.)** ◆





ಕರ್ನಾಟಕ ಸಂಘದ ಕಾರ್ಯಕ್ರಮದಲ್ಲಿ ತನ್ಮಯತೆಯಿಂದ ಆಲಿಸುತ್ತಿರುವ ಸಹೃದಯ ಸಾಹಿತ್ಯಾಸಕ್ತರು.



ಏನು ಚಿಗುರಿತೊ ಏನು ಹೂವಾಯಿತೊ ಬಿಡಿಸುವುದೇ ಈಗಿಲ್ಲಿ ತೊಡಕಾಯಿತೊ॥
ಚಿಗುರಿದವೆ ಆ ಮರದ ರೆಂಬೆ ಕೊಂಬೆ ಇಳಿದಂತೆ ನಮ್ಮೊಳಗೆ ದಿವದ ರಂಭೆ॥
–ಎಚ್.ಎಸ್.ಶಿವಪ್ರಕಾಶ್





# ನಾಟಕ : ವ್ಯಕ್ತಿ, ಸಮಾಜಗಳ ನಡುವಣ ಅನುಸಂಧಾನ

• ಟಿ.ಪಿ.ಅಶೋಕ್

ವ್ಯಕ್ತಿ ಹಾಗೂ ಸಮಾಜದ ನಡುವೆ ನಡೆಯುವ ಸಂಘರ್ಷವನ್ನು ಅನುಸಂಧಾನ ಮಾಡುವುದಕ್ಕಾಗಿ ನಾಟಕ ಹುಟ್ಟಿಕೊಂಡಿತು. ಸಮಾಜದಲ್ಲಿ ನಡೆಯುತ್ತಿದ್ದ ಸಂಘರ್ಷಗಳನ್ನು ನಾಟಕಕಾರರು ರಂಗಪ್ರಯೋಗಗಳ ಮೂಲಕ ಕಟ್ಟಿಕೊಟ್ಟರು. ಆ ನಂತರ ಸಂಘರ್ಷಗಳು ನಾಟಕ ಸಾಹಿತ್ಯದ ಜೀವಾಳವಾದವು.

ನಾಟಕ ಕಲೆ ವಿಭಿನ್ನ ಕಾಲಘಟ್ಟದಲ್ಲಿ ಹಲವು ಪ್ರಕಾರಗಳಲ್ಲಿ ಮೂಡಿ ಬರುತ್ತಿದೆ. ಆರಂಭ ಕಾಲದಲ್ಲಿಪೌರಾಣಿಕ ಹಿನ್ನೆಲೆಯಲ್ಲಿ ನಾಟಕಗಳ ರಚನೆ ನಡೆಯುತ್ತಿತ್ತು. ಮಹಾಕಾವ್ಯ ಮತ್ತು ಭಾವಗೀತೆಗಳು ಇದರಲ್ಲಿ ಪ್ರಧಾನವಾಗಿತ್ತು. ನಂತರ ವ್ಯಕ್ತಿ ಮತ್ತು ಸಮಾಜದ ಅನುಸಂಧಾನ ಪ್ರಕ್ರಿಯೆ ನಡೆಯಿತು. ನಾಟಕ ಹಲವು ಕಲೆಗಳ ಸಮ್ಮಿಶ್ರಣವಾಗಿದ್ದು, ಸಾಹಿತ್ಯದ ಪ್ರಮುಖ ಅಂಗವಾಗಿದೆ. ನಾಟಕ ಕಲೆಯ ವ್ಯಾಪ್ತಿ ಅತ್ಯಂತ ವಿಸ್ತಾರವಾಗಿದೆ.

ಪ್ರಸ್ತುತ ಸಂದರ್ಭದ ನಾಟಕಗಳು ಆಧುನಿಕತೆಗೆ ಒಳಗಾಗಿ ಕುತೂಹಲದಿಂದ ಕೂಡಿದ್ದು, ಅವುಗಳು ಉತ್ಕೃಷ್ಟವಾದ ಅನುಭವ ನೀಡುತ್ತಿವೆ ಕಾಲ ಬದಲಾದಂತೆ ನಾಟಕದಲ್ಲಿಯೂ ಕೆಲ ಬದಲಾವಣೆಗಳಾಗಿ ಆಧುನಿಕ ಕನ್ನಡದ ಕವಲುಗಳಾಗಿ ರೂಪುಗೊಂಡವು. ಭವಿಷ್ಯದಲ್ಲಿ ನಾಟಕ ರಚನಿಗೆ ಬೇಕಾದ ಮಜಲುಗಳನ್ನು ಸಮಕಾಲೀನ ನಾಟಕದ ರೂಪಕಗಳು ಕಟ್ಟಿಕೊಡುತ್ತಿವೆ, ಕಳೆದ ಶತಮಾನದಲ್ಲಿ ರಂಗ ಪ್ರಕ್ರಿಯೆಯಲ್ಲಿ ಹೊಸ ನಾಟಕಗಳನ್ನು ತೋರಿಸುವ ಕಲೆ ಪ್ರಾರಂಭವಾಯಿತು. ಉದಯೋನ್ಮುಖ ನಾಟಕಕಾರರು ಹೊಸ ರಂಗಪ್ರಯೋಗಗಳಿಗೆ ನಾಂದಿ ಹಾಡಿದರು.

(ಭಾಷಣದಿಂದ ಆಯ್ದ ಭಾಗ)




ದಿನಾಂಕ ೧೭-೦೩-೨೦೧೪ರಂದು ನೀನಾಸಂ ಹೆಗ್ಗೋಡು ಇವರ ಸಹಯೋಗದೊಂದಿಗೆ ಸಂಘವು ಹಮ್ಮಿಕೊಂಡ ನಾಟಕ ಅಧ್ಯಯನ ಶಿಬಿರವನ್ನು ಉದ್ಘಾಟಿಸಿ ವಿಮರ್ಶಕ ಟಿ.ಪಿ. ಅಶೋಕ್ ಮಾತನಾಡಿದರು. ಪ್ರೊ. ಡಿ.ಎಸ್. ಮಂಜುನಾಥ್, ವಿಜಯಾ ಶ್ರೀಧರ್ ಮತ್ತು ಡಾ. ಎಚ್.ಎಸ್. ನಾಗಭೂಷಣ್ ಚಿತ್ರದಲ್ಲಿದ್ದಾರೆ.



ನಾಟಕ ಅಧ್ಯಯನ ಶಿಬಿರದ ಒಂದು ನೋಟ




ಬನವೂ ಅರಳಿತು, ಮನವೂ ನಲಿಯಿತು ನೆಲದ ಕಣ್ಣೆವೆ ತೆರೆಯಿತು।
ಎರಡು ಒಡಲಲಿ ಒಂದೆ ಹಿಗ್ಗಿನ ಸೊಗದ ಪರಿಷೆಯು ನೆರೆಯಿತು
–ಎಚ್.ಎಸ್.ಶಿವಪ್ರಕಾಶ್

# ಹೆಣ್ಣಿನ ಕಣ್ಣಿನಿಂದ ನೋಡುವುದೆಂದರೆ...

ಸ್ತ್ರೀವಾದೀ ನೋಟವೆಂದರೆ, ಒಟ್ಟು ಸಮಾಜವನ್ನು ಗ್ರಹಿಸುವಾಗ ಹೆಣ್ಣಿನ ಕಣ್ಣಿನಿಂದಲೂ ನೋಡುವಂತೆ ಒತ್ತಾಯಿಸುವುದೇ ಆಗಿದೆ. ಹೆಣ್ಣಿನ ಕಣ್ಣಿನಿಂದ ನೋಡುವುದೆಂದರೆ ಹೆಂಗಸರ ಕಣ್ಣಿನಿಂದ ನೋಡುವುದೆಂದಲ್ಲ. ಎಷ್ಟೋ ಸಲ ಹೆಣ್ಣುಮಕ್ಕಳೂ ಕೂಡ ಗಂಡಿನ ಕಣ್ಣಿನಿಂದ ಲೋಕಗ್ರಹಿಕೆ ಮಾಡಿಕೊಳ್ಳುತ್ತಾರೆ.



ವಿಮರ್ಶೆಯಲ್ಲಿ ಆಸಕ್ತಿ ಹೊಂದಿರುವ ಸಬಿತಾ ಬನ್ನಾಡಿ ಅವರು 'ಸಾಹಿತ್ಯ ನಿರೂಪಣೆಗಳು' ಎಂಬ ವಿಮರ್ಶಾ ಕೃತಿಯನ್ನು ಪ್ರಕಟಿಸಿದ್ದಾರೆ. 'ಆಲಯವು ಬಯಲಾಗಿ' ಕೃತಿ ಅವರ ಡಾಕ್ಟರೇಟ್ ಪ್ರಬಂಧ. ಬನ್ನಾಡಿ ಅವರು ಪ್ರಸ್ತುತ ಭದ್ರಾವತಿಯ ಸರ್.ಎಂ.ವಿ ಕಾಲೇಜಿನ ಸಾಹಿತ್ಯಾಸಕ್ತ ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಉಪನ್ಯಾಸಕಿ.

**• ಡಾ. ಸಬಿತಾ ಬನ್ನಾಡಿ**

ಸ್ತ್ರೀವಾದೀ ನೋಟವೆಂದರೇನು? ಅದರ ಅವಶ್ಯಕತೆ ಇದೆಯೇ? ಎಂಬ ಪ್ರಶ್ನೆಯನ್ನು ಸಹಜವಾಗಿ ನಾವು ಎದುರಿಸಬೇಕಾಗುತ್ತದೆ. ಮುಖ್ಯವಾಗಿ ಈ ವಿಷಯ ಎತ್ತುತ್ತಿದ್ದಂತೆಯೇ ಮಾನವತಾವಾದ ಸಾಕಲ್ಲ, ಸ್ತ್ರೀವಾದ ಏಕೆ ಬೇಕು? ಎಂಬ ಮುಗ್ಧ ಪ್ರಶ್ನೆಯನ್ನು ಹಲವರು ಕೇಳುತ್ತಾರೆ. ಸ್ತ್ರೀವಾದ, ದಲಿತವಾದ, ಶೂದ್ರವಾದಗಳೆಲ್ಲ ಹುಟ್ಟುವುದೇ ಮಾನವತಾವಾದದ ಒಂದು ಅಂಗವಾಗಿಯೇ. ಎಲ್ಲಿ ಮಾನವತಾವಾದವನ್ನು ಮರೆಗೆ ಸರಿಸಿರಲಾಗಿರುತ್ತದೋ ಅಲ್ಲಿ ಇವೆಲ್ಲವನ್ನೂ ಪ್ರತ್ಯೇಕವಾಗಿ ಕೇಳಬೇಕಾದ ಅನಿವಾರ್ಯತೆ ಹುಟ್ಟುತ್ತದೆ.

ಸ್ತ್ರೀವಾದೀ ನೋಟವೆಂದರೆ, ಒಟ್ಟು ಸಮಾಜವನ್ನು ಗ್ರಹಿಸುವಾಗ ಹೆಣ್ಣಿನ ಕಣ್ಣಿನಿಂದಲೂ ನೋಡುವಂತೆ ಒತ್ತಾಯಿಸುವುದೇ ಆಗಿದೆ. ಹೆಣ್ಣಿನ ಕಣ್ಣಿನಿಂದ ನೋಡುವುದೆಂದರೆ ಹೆಂಗಸರ ಕಣ್ಣಿನಿಂದ ನೋಡುವುದೆಂದಲ್ಲ. ಎಷ್ಟೋ ಸಲ ಹೆಣ್ಣುಮಕ್ಕಳೂ ಕೂಡ ಗಂಡಿನ ಕಣ್ಣಿನಿಂದ ಲೋಕಗ್ರಹಿಕೆ ಮಾಡಿಕೊಳ್ಳುತ್ತಾರೆ. ಹೀಗಾಗಿ, ಇದು ಹೆಣ್ಣಿಗೆ ಅಥವಾ ಗಂಡಿಗೆ ಸಂಬಂಧಿಸಿದ ಪ್ರಶ್ನೆಯಲ್ಲ. ಇದು ಲೋಕವನ್ನು ಇಡಿಯಾಗಿ ಗ್ರಹಿಸುವ ಕ್ರಮವನ್ನು ಕುರಿತಾದದ್ದು. ಅಂದರೆ, ನಮ್ಮ ಲೋಕಗ್ರಹಿಕೆಗಳನ್ನು ಹಲವು ಚಿಂತನೆಗಳು ನಿರ್ಬಂಧಿಸಿರುತ್ತವೆ. ಅದನ್ನೇ ನಿಜವೆಂದು ಭಾವಿಸುವ ನಾವು ಆ ಚಿಂತನೆಗಳಿಗೆ ಪೂರಕವಾಗಿಯೇ ಪ್ರತಿಕ್ರಿಯಿಸುತ್ತೇವೆ. ಉದಾ: 'ಹೆಣ್ಣಿಗೆ ಶೀಲ ಪ್ರಾಣಕ್ಕಿಂತಲೂ ಮುಖ್ಯ' ಎಂಬ ಹೇಳಿಕೆಯನ್ನೇ ಗಮನಿಸಿ. ಈ ಮಾತಿನಿಂದಾಗಿ ಅತ್ಯಾಚಾರಕ್ಕೆ ಒಳಗಾದ ಎಷ್ಟೋ ಹೆಣ್ಣುಮಕ್ಕಳು ಪ್ರಾಣಕಳೆದುಕೊಂಡಿದ್ದಾರೆ. ಅಂದರೆ, ಪುರುಷ ಪರವಾದ ಈ ಅನ್ಯಾಯದ ಹೇಳಿಕೆಯನ್ನು ಸ್ತ್ರೀಯರು ಪ್ರಶ್ನಿಸದೇ ಒಪ್ಪಿಕೊಂಡಿದ್ದಾರೆ. ಹೆಣ್ಣಿಗಷ್ಟೇ ಅಲ್ಲ, ಗಂಡಿಗೂ ಶೀಲ ಮುಖ್ಯ. ಅತ್ಯಾಚಾರ ಮಾಡಿದ ಗಂಡಿಗೆ ಸಮಾಜ ಶಿಕ್ಷೆ ನೀಡಬೇಕು ಎಂಬ ಚಿಂತನೆ ಹಾಸುಹೊಕ್ಕಾಗಿದ್ದರೆ ಆಗ ಗಂಡಿಗೊಂದು ಅಂಕೆಯಾದರೂ ಇರುತಿತ್ತು. ಹೀಗೆ ನಮ್ಮ ಚಿಂತನೆಯೊಳಗೇ ಸೇರಿಹೋಗಿರುವ ಎಷ್ಟೋ ಸ್ತ್ರೀವಿರೋಧೀ ಧೋರಣೆಗಳನ್ನು ಅರಿತುಕೊಳ್ಳಲು ನಮಗೆ ಸ್ತ್ರೀವಾದೀ ನೋಟದ ಅವಶ್ಯಕತೆ ಇದೆ. ಇದಕ್ಕೆ ಪೂರಕವಾದ ಇನ್ನೊಂದು ಮಾತು: 'ನಾನು ಅವನಲ್ಲ ಅವಳು' ಎಂಬ ಪುಸ್ತಕ ಓದುವ ತನಕವೂ ನನಗೆ ಹಿಜ್ರಾಗಳ ಸಂಕಟದ ಪೂರ್ಣ ಅರಿವಿರಲಿಲ್ಲ. ಆ ಪುಸ್ತಕ ಓದಿದ ಮೇಲೆ ನನಗೆ ಅವರನ್ನು ಅವರ ಕಣ್ಣಿಂದ ನೋಡುವುದು ಸಾಧ್ಯವಾಯಿತು. ಅಂದರೆ, ನಮ್ಮ ಕಣ್ಣುಗಳಿಂದ ನಾವು ನೋಡುವ ನೋಟಗಳು ಎಷ್ಟೋ ಬಾರಿ ನಮ್ಮ ನೋಟಗಳಾಗಿರುವುದಿಲ್ಲ. ನಮಗೆ ನೋಡಲು 'ಕಲಿಸಿಕೊಟ್ಟ' ನೋಟಗಳಾಗಿರುತ್ತವೆ. ಹೀಗೆಯೇ ಹೆಂಗಸರನ್ನು ಮತ್ತು ಗಂಡಸರನ್ನು ನೋಡುವ ನೋಟಗಳನ್ನು ನಮಗೆ ಕಲಿಸಿಕೊಡಲಾಗಿದೆ. ನಾವೀಗ ಅದರಿಂದ ಹೊರಬರಬೇಕಾಗಿದೆ. ಮನುಸ್ಮೃತಿಯಲ್ಲಿ ಮಾತೊಂದು ಬರುತ್ತದೆ: "ಹೆಂಡತಿಯು ರೋಗಿ, ಮದ್ಯವ್ಯಸನಿ, ದುಶ್ಶೀಲೆಯಾಗಿದ್ದರೆ ಅವಳನ್ನು ಗಂಡ ಬಿಟ್ಟು ಬಿಡಬಹುದು." ಅದರಲ್ಲೇ ಈ ಮಾತೂ ಇದೆ: "ರೋಗಿ, ಮದ್ಯವ್ಯಸನಿ, ದುಶ್ಶೀಲನಾದ ಗಂಡನನ್ನು ನೋಡಿಕೊಳ್ಳದ ಹೆಂಗಸನ್ನು ಬಿಟ್ಟು ಬಿಡಬೇಕು. ಅವಳಿಗೆ ಜಗಲಿಯಲ್ಲಿ ಅನ್ನ ಹಾಕಬೇಕು". ಹೇಗಿದೆ ನ್ಯಾಯ! ಎರಡೂ ಕಡೆಯಿಂದ ಅವಳಿಗೇ ಏಟು. ಇದು ನಮ್ಮ ಶಾಸ್ತ್ರಗಳು, ಕಾಯಿದೆಗಳು. ಇದನ್ನು ಗಂಡಸರು ಮಾತ್ರವಲ್ಲ ಹೆಂಗಸರೂ ಒಪ್ಪಿಕೊಳ್ಳುವಂತೆ ಮಾಡಲಾಗಿದೆ. ಇದನ್ನೇ 'ಸ್ತ್ರೀತ್ವ' ಎಂದು ನಿರೂಪಿಸಲಾಗಿದೆ. ಇದನ್ನೇ ಪಿತೃ ಪ್ರಧಾನ, ಪುರುಷ ಪ್ರಧಾನ ಚಿಂತನೆ ಎಂದು ಕರೆಯುವುದು. ಹೆಣ್ಣೂ ಇದನ್ನೇ ಪ್ರತಿಪಾದಿಸಿದರೆ ಅವಳದೂ

(ಮುಂದಿನ ಪುಟಕ್ಕೆ)



ಯಾವ ಸಂತಸ ನದಿಯು ಬಂದಿತು ನಮ್ಮನಿಲ್ಲಿಗೆ ಹುಡುಕುತ
ಯಾವ ಮಾಂತ್ರಿಕ ಪುಳಕ ಹಾಯಿತು ನಮ್ಮ ಲೋಕ ತಡವುತ॥

–ಎಚ್.ಎಸ್.ಶಿವಪ್ರಕಾಶ್





# ಚಾಂಚಲ್ಯ ನಿಯಂತ್ರಿಸುವ ಪ್ರಬುದ್ಧತೆ ಕವಿಗೆ ಬೇಕು...

● ಡಾ|| ಸಿದ್ದಲಿಂಗ ಪಟ್ಟಣಶೆಟ್ಟಿ

ಕಾವ್ಯ ರಚಿಸುವವರಿಗೆಚಾಂಚಲ್ಯವನ್ನು ಹತೋಟಿಗೆ ತರುವ ದೃಢ ಮನಸ್ಸು ಮೊದಲು ಇರಬೇಕು. ಅಂತಹ ದೃಢ ಮನಸ್ಸುಗಳಿಂದ ಮಾತ್ರ ಉತ್ತಮ ಹಾಗೂ ಪರಿಣಾಮಕಾರಿಯಾದ ಮನಕಲಕುವ ಕಾವ್ಯ ರಚಿಸಲು ಸಾಧ್ಯ. ಚಾಂಚಲ್ಯವನ್ನು ಹತೋಟಿಗೆ ತಂದು ಅದರ ಮೂಲಕ ಪರಿಣಾಮಕಾರಿಯಾದ ಕಾವ್ಯ ರಚಿಸಿದವರಲ್ಲಿ ದ.ರಾ.ಬೇಂದ್ರೆ ಮೊದಲಿಗರು. ಚಾಂಚಲ್ಯದ ಅಧಿಪತಿಯಾಗಿ ಅವರು ಮಿನುಗಿದರು.

ಜೀವನದ ಏಷ್ಟೋನೋವುಗಳನ್ನು ಕಂಡ ಬೇಂದ್ರೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ನಿರಂತರವಾಗಿ ಕೃಷಿ ಮಾಡಿದರು. ಬೇಂದ್ರೆ ಅವರು ರಚಿಸಿದ ಕಾವ್ಯಗಳನ್ನು ಓದುವುದಕ್ಕೆ ಅವರಂತಹ ದೃಢ ಮನಸ್ಸು ಇರುವ ವ್ಯಕ್ತಿಯಾಗಿರಬೇಕೆ ಹೊರತು, ಕೇವಲ ನೆಪ ಮಾತ್ರಕ್ಕೆ ಓದುವುದರಿಂದ ಅವರನ್ನು ಅರ್ಥಮಾಡಿಕೊಳ್ಳಲು ಸಾಧ್ಯ ಇಲ್ಲ.

ದ.ರಾ.ಬೇಂದ್ರೆ ಅವರನ್ನು ಓದಿಕೊಂಡು, ನಿರಂತರವಾಗಿ ಅವರ ಜತೆಗಿನ ಒಡನಾಟದಿಂದ ನನಗೆ ಕರ್ನಾಟಕ ಸಂಘದ ಜೀವಮಾನದ ಸಾಧನೆಯ 'ದ.ರಾ.ಬೇಂದ್ರೆ ಕಾವ್ಯ ಪ್ರಶಸ್ತಿ' ಸಿಕ್ಕಿದೆ. ಇದು ನನಗೆ ಅತ್ಯಂತ ಸಂತೋಷದ ಸಂಗತಿ. (ದ.ರಾ.ಬೇಂದ್ರೆ ಕಾವ್ಯ ಪ್ರಶಸ್ತಿ ಸ್ವೀಕರಿಸಿ ಮಾಡಿದ ಬಾಷಣದಿಂದ ಆಯ್ದ ಭಾಗ) ◆




ದಿ:೧೯.೪.೨೦೧೪ರಂದು ಹಮ್ಮಿಕೊಂಡ ಕಾರ್ಯಕ್ರಮದಲ್ಲಿ ಕರ್ನಾಟಕ ಸಂಘವು ಕಾವ್ಯ ಕ್ಷೇತ್ರದಲ್ಲಿ ಜೀವಮಾನ ಸಾಧನೆ ಮಾಡಿದ ಪ್ರಸಿದ್ದ ಕವಿ ಡಾ|| ಸಿದ್ದಲಿಂಗಪಟ್ಟಣಶೆಟ್ಟಿ ಅವರಿಗೆ 'ದ.ರಾ.ಬೇಂದ್ರೆ ಕಾವ್ಯ ಪ್ರಶಸ್ತಿ'ಯನ್ನು ಪ್ರದಾನ ಮಾಡಿತು. ಕಾರ್ಯಕ್ರಮ ನಿರೂಪಿಸಿದ ಪ್ರೊ.ಸಿ.ಯು.ಸೋಮಶೇಖರ್, ಎಚ್.ಎನ್.ಶ್ರೀಲಕ್ಷ್ಮೀ, ಸ್ವಾಗತ ಕೋರಿದ ಡಾ|| ಎಚ್.ಎಸ್.ನಾಗಭೂಷಣ, ಪ್ರಶಸ್ತಿ ಪ್ರಧಾನ ಮಾಡಿದ ವಿಜಯಾ ಶ್ರೀಧರ್, ಹೇಮಲತಾ ಪಟ್ಟಣಶೆಟ್ಟಿ, ಅಭಿನಂದನಾ ಭಾಷಣ ಮಾಡಿದ ಪ್ರೊ.ಚಂದ್ರಶೇಖರ್ ವಸ್ತ್ರದ ಮತ್ತು ಪ್ರಾಸ್ತಾವಿಕ ನುಡಿಗಳನ್ನಾಡಿದ ಜಯದೇವಪ್ಪ ಜೈನಕೇರಿ ಚಿತ್ರದಲ್ಲಿದ್ದಾರೆ. ಕಾರ್ಯಕ್ರಮದ ಮೊದಲಿಗೆ ವಿಜಯಾ ಕಾಂತೇಶ್ ಮೂರ್ತಿ ಆರಂಭಗೀತೆ ಹಾಡಿದರು.

# ಹೆಣ್ಣಿನ ಕಣ್ಣಿನಿಂದ ನೋಡುವುದೆಂದರೆ...

(ಹಿಂದಿನ ಪುಟದಿಂದ)

ಪುರುಷಪ್ರಧಾನ ಚಿಂತನೆಯೇ ಆಗಿರುತ್ತದೆ.

ನಮ್ಮ ಸಾಹಿತ್ಯ ಕೃತಿಗಳೆಂದರೆ ಅದು ಸಮಾಜದಿಂದ ಹೊರತಾದುದಲ್ಲ. ಅವು ಒಂದು ರೀತಿಯಲ್ಲಿ ನಮ್ಮ ಸಾಂಸ್ಕೃತಿಕ ಚರಿತ್ರೆಗಳಾಗಿರುತ್ತವೆ. ಅವುಗಳು ಹೇಗೆ ಈ ಲೋಕವನ್ನು ಗ್ರಹಿಸುತ್ತಿವೆ, ಅರೆ ಸತ್ಯವನ್ನು ಪ್ರತಿಪಾದಿಸುತ್ತಿವೆಯೇ ಎಂದು ತಿಳಿಯಲು ಸ್ತ್ರೀವಾದೀ ವಿಮರ್ಶೆಯ ಅಗತ್ಯವಿದೆ. ಪದವಿ ತರಗತಿಗಳಿಗೆ ಪಠ್ಯವಾಗಿರುವ, ಕನ್ನಡದ ಶ್ರೇಷ್ಠ ಕೃತಿಗಳಾದ ಕಾರಂತರ 'ಸರಸಮ್ಮನ ಸಮಾಧಿ' ಮತ್ತು ಬೇಂದ್ರೆಯವರ 'ಸಖೀಗೀತ'ಗಳು ನಿಜವಾದ ಅರ್ಥದಲ್ಲಿ ಸ್ತ್ರೀವಾದೀ ಪಠ್ಯಗಳು. ಸ್ತ್ರೀವಾದವನ್ನು ಸರಿಯಾಗಿ ಅರ್ಥಮಾಡಿಕೊಂಡ ಗಂಡು ಮತ್ತು ಹೆಣ್ಣು ಯಶಸ್ವೀ ದಾಂಪತ್ಯ ಜೀನವ ನಡೆಸಬಹುದು. ಮೇಲಿನ ಎರಡೂ ಕೃತಿಗಳು ಅದನ್ನೇ ಮಂಡಿಸುತ್ತಿವೆ. ಸರಸಮ್ಮನ ಸಮಾಧಿಯ ಸುನಾಲಿನಿ, ಭಾಗೀರಥಿಯರು ಇದರ ಪ್ರತೀಕಗಳು. ನಲವತ್ತರ ದಶಕದಲ್ಲೇ ಕಾರಂತರು ಅತ್ಯಂತ ಖಚಿತವಾಗಿ ದಾಂಪತ್ಯದಲ್ಲಿ ಹೆಣ್ಣಿಗಾಗುತ್ತಿರುವ ಅನ್ಯಾಯವನ್ನು ಪ್ರತಿಭಟಿಸುತ್ತಾರೆ. ದಾಂಪತ್ಯದಲ್ಲಿ 'ಸರಸಮ್ಮನ' ಅಂದರೆ, 'ಸರಸ'ದ ಸಮಾಧಿಯಾಗುವುದನ್ನೂ ಅದನ್ನು ತಿಳಿಯದ ಮೂರ್ಖ ಜನ ದಾಂಪತ್ಯದ ಯಶಸ್ಸಿಗಾಗಿಅದೇಸಮಾಧಿಗೆಹರಕೆಹೊರುವುದನ್ನೂ ವ್ಯಂಗ್ಯವಾಗಿ ನಿರೂಪಿಸುತ್ತಾರೆ. ಸಖೀಗೀತವು ದಾಂಪತ್ಯದೊಳಗಣ ಸಖ್ಯದ ಅವಶ್ಯಕತೆಯನ್ನು ಎತ್ತಿಹಿಡಿಯುತ್ತದೆ.

ಸ್ತ್ರೀವಾದದಲ್ಲಿ ಹಲವು ಕವಲುಗಳಿವೆ. ಅದರಲ್ಲಿ ಒಂದು ಕವಲು ಸಾಂಸ್ಕೃತಿಕ ಸ್ತ್ರೀವಾದ. ಇದು ಹೆಣ್ಣಿನ ಶಕ್ತಿಮೂಲವನ್ನು ಅನ್ವೇಷಿಸುವ ಕೆಲಸ ಮಾಡುತ್ತದೆ. ಜಾನಪದದಲ್ಲಿ ಇಂತಹ ಹಲವು ಮಾದರಿಗಳಿವೆ. ಕೊನೆಯಿಲ್ಲದ ತನ್ನ ಬದುಕಿನ ಬವಣೆಗಳ ನಡುವೆಯೂ ಹೆಣ್ಣು ಉಳಿಸಿಕೊಂಡು ಬಂದಿರುವ ಜೀವ ಚೈತನ್ಯವನ್ನು ಈ ಮಾದರಿಗಳಲ್ಲಿ ಕಂಡುಕೊಳ್ಳಬಹುದು. ಜನಪದ ತ್ರಿಪದಿಯೊಂದು ಹೀಗಿದೆ: 'ಜನಕರಾಜನ ಮಗಳು ವನಕೆ/ತೊಟ್ಟಿಲು ಕಟ್ಟಿ ಲವಕುಶರ ತೂಗ್ಯಾಳು/ ಸುಖದಿ ವನವಾಸ ಕಳೆದಾಳು.' ಸೀತೆಯ ಶಕ್ತಿಯನ್ನು ಎತ್ತಿಹಿಡಿಯುವ ಈ ತ್ರಿಪದಿ ಅದೇ ಹೊತ್ತಿಗೆ ರಾಮನ ಸುಖವಿಲ್ಲದ ಬದುಕನ್ನೂ ವ್ಯಂಗ್ಯಮಾಡುತ್ತಿದೆ. ಇಂತ ಅಸೀಮ ಶಕ್ತಿಯ ಹೆಣ್ಣನ್ನು ಹಲವು ಸೀಮೆಗಳ ಒಳಗೆ ತುರುಕುವ ವ್ಯವಸ್ಥೆಯ ಹುನ್ನಾರಗಳನ್ನು ಬಯಲಿ ಗಿಡಲು ಸ್ತ್ರೀವಾದೀ ವಿಮರ್ಶೆಯ ಅವಶ್ಯಕತೆ ಇದೆ. ಅದರೊಂದಿಗೆ ಮಾನವತೆಯ ಅಗತ್ಯವನ್ನು ಒತ್ತಾಯಿಸುವುದು, ಅನ್ಯಾಯದ ವಿರುದ್ಧ ಪ್ರತಿಭಟಿಸುವುದು, ಹಕ್ಕುಗಳನ್ನು ಪ್ರತಿಪಾದಿಸುವುದನ್ನೂ ಸ್ತ್ರೀವಾದ ಮಾಡುತ್ತದೆ.

ಇಂದಿನ ಅತ್ಯಾಧುನಿಕ ಯುಗದಲ್ಲೂ ಹೆಣ್ಣನ್ನು ಹಲವೆಡೆ ವಿಕ್ಟಿಮೈಸ್ ಮಾಡಲಾಗುತ್ತಿದೆ. ಅವಳು ಹೀಗೆ ಬಲಿಪಶು ಆಗುವುದರ ಹಿಂದೆ ಹೆಣ್ಣು ನೋಟವನ್ನು ನಾವು ಹೊಂದದೇ ಇರುವುದೂ ಕಾರಣವಾಗಿದೆ. ಯುದ್ಧ, ದೇಶ ವಿಭಜನೆ, ಕೋಮು ಗಲಭೆ ಈ ಎಲ್ಲ ಸಂದರ್ಭದಲ್ಲಿ ವಿರೋಧಿಗಳನ್ನು ಮಣಿಸಲು ಅವರ ಸ್ತ್ರೀಯರ ಮೇಲೆ ಅತ್ಯಾಚಾರ ಮಾಡಲಾಗುತ್ತಿದೆ. ಇದು ಹೆಣ್ಣನ್ನು ನೋಡುವ ದೃಷ್ಟಿಕೋನದ ಕೊರತೆಯಿಂದ ಹುಟ್ಟಿದ ದಾಳಿಯಾಗಿದೆ. ದುಡಿಯುವ ಜಾಗಗಳಲ್ಲಿ ಹೆಚ್ಚುತ್ತಿರುವ ಲೈಂಗಿಕ ದೌರ್ಜನ್ಯ ಕೂಡ ಹೆಣ್ಣನ್ನು ಮನೆಯಲ್ಲೇ ಬಂಧಿಯಾಗುವಂತೆ ಅವಳೇ ಬಯಸುವಂತೆ ಮಾಡಲು ಇರುವ ಅಸ್ತ್ರವಾಗಿರುತ್ತದೆ. ಹೆಣ್ಣಿನ ಮೇಲಿನ ಆಕ್ರಮಣಗಳನ್ನು ಎರಡು ರೀತಿಯಲ್ಲಿ ವ್ಯವಸ್ಥಿತಗೊಳಿಸಲಾಗುತ್ತದೆ. ಒಂದು, ಅವಳನ್ನು ಪುರುಷ ಭೋಗದ ವಸ್ತುವೆಂದು ಪ್ರತಿಪಾದಿಸಿ ಅದನ್ನು ಸ್ತ್ರೀ ಪುರುಷರಿಬ್ಬರೂ ಒಪ್ಪಿಕೊಳ್ಳುವಂತೆ ಮಾಡಿ ನೇರವಾಗಿ ಆಕ್ರಮಣ ಮಾಡುವುದು. ಇನ್ನೊಂದು,ಹೆಣ್ಣನ್ನೇ ಪುರುಷಪರಚಿಂತಕಿಯನ್ನಾಗಿ ಮಾಡಿ ಹೆಣ್ಣಿನ ಮೇಲೆ ಹೆಣ್ಣೇ ದಬ್ಬಾಳಿಕೆ ಮಾಡುವಂತೆ ಮಾಡುವುದು. ನಮ್ಮ ಇಂದಿನ ಮಾರುಕಟ್ಟೆ ಯುಗ ಈ ಎರಡೂ ಆಕ್ರಮಣಗಳನ್ನು ಮಾಧ್ಯಮಗಳನ್ನು ಬಳಸಿಕೊಂಡು ನಿರಂತರವಾಗಿ ಮಾಡುತ್ತಿವೆ. ಇವುಗಳ ಕುರಿತು ಎಚ್ಚರವಿರಬೇಕಾದರೆ ನಾವು ಮೊದಲು ಸ್ತ್ರೀವಾದಿಗಳಾಗಬೇಕಾಗುತ್ತದೆ.

**(ತೀರ್ಥಹಳ್ಳಿಯ ತುಂಗಾ ಮಹಾ ವಿದ್ಯಾಲಯದಲ್ಲಿ ಕಾಲೇಜಿನ ಸಹಯೋಗದಲ್ಲಿ ಕರ್ನಾಟಕ ಸಂಘವು ಹಮ್ಮಿಕೊಂಡ ಸಾಹಿತ್ಯ ಪ್ರಚಾರೋಪನ್ಯಾಸದಲ್ಲಿ ಮಾಡಿದ ಉಪನ್ಯಾಸದ ಲೇಖನ ರೂಪ)**◆






ರೋಮರೋಮಗಳಲಿ ಹೂಬನವರಳಿ ಪರಿಮಳವಲೆಯಿತು||
ತೊರೆದು ಒಪಂಜರ ಗಿಳಿಯ ಜೋಡಿಯು ದಿಶೆಗಳಾಚೆ ತೇಲಿತು||
–ಎಚ್.ಎಸ್.ಶಿವಪ್ರಕಾಶ್

## ಏಪ್ರಿಲ್ ಮಾಸದ ತಿಂಗಳ ಅತಿಥಿ, ಶಿವರಾಮ ಕಾರಂತ ಪ್ರಶಸ್ತಿ ಪ್ರದಾನ

# ಸಾಹಿತ್ಯದಿಂದ ಬದುಕಿಗೆ ಮೆರುಗು, ಉತ್ಸಾಹ

• ಎಸ್. ದಿವಾಕರ್



ದಿ:೨೬.೪.೨೦೧೪ರಂದು ಹಮ್ಮಿಕೊಂಡ ಏಪ್ರಿಲ್ ಮಾಸದ ತಿಂಗಳ ಅತಿಥಿ ಕಾರ್ಯಕ್ರಮದಲ್ಲಿ ಅತಿಸಣ್ಣಕಥೆಗಳು ಕುರಿತು ಕತೆಗಾರ ಎಸ್.ದಿವಾಕರ್ ಉಪನ್ಯಾಸ ನೀಡಿದರು. ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ವಿಜಯಾಶ್ರೀಧರ್ ಅವರನ್ನು ಅಭಿನಂದಿಸಿದರು. ಈ ಕಾರ್ಯಕ್ರಮವನ್ನು ಎಂ.ಆಶಾಲತಾ ನಿರೂಪಿಸಿದರು, ಪ್ರೊ.ಸಿ.ಯು.ಸೋಮಶೇಖರ್ ಸ್ವಾಗತ ಕೋರಿದರು.

ಹತ್ತೊಂಬತ್ತನೇ ಶತಮಾನದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಸಣ್ಣಕತೆಗಳ ಉಗಮವಾಯಿತು. ೧೯೩೦ರಲ್ಲಿ ಇದನ್ನು ಅತಿಸಣ್ಣ ಕತೆಗಳಾಗಿ ವರ್ಗೀಕರಿಸಲಾಯಿತು. ಸಾಹಿತ್ಯ, ಪುರಾಣ ಕತೆಗಳು, ರಾಜಕೀಯ ಘಟನಾವಳಿಗಳನ್ನು ವ್ಯಂಗ್ಯಚಿತ್ರಗಳ ಮೂಲಕ ಬಿಂಬಿಸುವುದರಿಂದ ಅವು ಅತಿಸಣ್ಣ ಕತೆಗಳಷ್ಟೇ ಪ್ರಭಾವ ಬೀರುತ್ತವೆ.

ಅತಿಸಣ್ಣ ಕತೆಗಳು ಕಾವ್ಯಗಳಷ್ಟೇ ಪ್ರಭಾವ ಹೊಂದಿವೆ. ಅತಿಸಣ್ಣ ಕತೆಗಳಲ್ಲಿ ವಿಷಯ, ಪಾತ್ರ ಸನ್ನಿವೇಶಗಳನ್ನು ವಿಸ್ತಾರವಾಗಿ ಅನಾವರಣ ಗೊಳಿಸಲು ಸಾಧ್ಯವಿಲ್ಲ. ಓದುಗ ತನ್ನ ಅನುಭವ ಮತ್ತು ಪಾತ್ರಗಳಿಗೆ ಕಲ್ಪನೆ ಸೃಷ್ಟಿಸಿಕೊಳ್ಳುವ ಮೂಲಕ ಅತಿಸಣ್ಣ ಕತೆಗಳಿಗೆ ಹೊಸರೂಪ ನೀಡಲು ಸಾಧ್ಯ.

ಸಾಹಿತ್ಯದ ಸೊಗಡು ಇಲ್ಲದಿದ್ದರೆ ಬದುಕಿನಲ್ಲಿ ಸ್ವಾರಸ್ಯ ಇರುವುದಿಲ್ಲ. ದೈನಂದಿನ ಜೀವನ ಕ್ರಿಯೆಗೆ ಹೊಸ ಮೆರುಗು ಮತ್ತು ಉತ್ಸಾಹ ತರುವಲ್ಲಿ ಸಾಹಿತ್ಯ ಪ್ರಮುಖ ಸಾಧನ. ನಿರ್ದಿಷ್ಟತೆಯ ಚಿಂತನೆಗಳಿಗೆ ವಿಶಿಷ್ಟತೆ ಬೆರೆಸಿ ಬದುಕಿನ ದಿಕ್ಕನ್ನು ಬದುಕಿಸುವ ಸಾಮರ್ಥ್ಯ ಸಾಹಿತ್ಯಕ್ಕಿದೆ. ಒಟ್ಟಾರೆ ಸಾಹಿತ್ಯ ಬದುಕಿನಲ್ಲಿ ಹೊಸ ಆಶಾಭಾವನೆ ಮತ್ತು ಸಾಮರಸ್ಯ ಮೂಡಿಸುತ್ತದೆ. (ಅತಿಸಣ್ಣಕತೆಗಳು ಕುರಿತ ಉಪನ್ಯಾಸದಿಂದ ಆಯ್ದ ಭಾಗ) ◆

# ಡಾ. ಎಸ್.ವಿ. ಶ್ರೀನಿವಾಸರಾವ್ ಅವರಿಗೆ ಡಾ. ಶಿವರಾಮ ಕಾರಂತ ಮಕ್ಕಳ ಸಾಹಿತ್ಯ ಪ್ರಶಸ್ತಿ ಪ್ರಧಾನ



ದಿ:೧೫.೦೫.೨೦೧೪ರಂದು ಸಂಘವು ಹಮ್ಮಿಕೊಂಡ ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿನ ಜೀವಮಾನ ಸಾಧನೆಗಾಗಿ ಕರ್ನಾಟಕ ಸಂಘವು ಸ್ಥಾಪಿಸಿರುವ ಡಾ॥ಶಿವರಾಮ ಕಾರಂತ ಮಕ್ಕಳ ಸಾಹಿತ್ಯ ಪ್ರಶಸ್ತಿಯನ್ನು ಹಿರಿಯ ಸಾಹಿತಿ ಎಸ್.ವಿ ಶ್ರೀನಿವಾಸರಾವ್ ಅವರಿಗೆ ಪ್ರಧಾನ ಮಾಡಲಾಯಿತು. ಎಚ್.ಎನ್.ಶ್ರೀಲಕ್ಷ್ಮೀ, ಕಾರ್ಯಕ್ರಮ ನಿರೂಪಿಸಿದ ಪ್ರಕಾಶ್ ಕಮ್ಮಾರ್, ಅಭಿನಂದನಾ ಭಾಷಣ ಮಾಡಿದ ಅಬ್ದುಲ್ ಬಷೀರ್, ಸ್ವಾಗತ ಕೋರಿದ ಡಾ॥ ಎಚ್.ಎಸ್.ನಾಗಭೂಷಣ್, ಪ್ರಶಸ್ತಿ ಪ್ರಧಾನ ಮಾಡಿದ ವಿಜಯಾ ಶ್ರೀಧರ್, ಪ್ರಾಸ್ತಾವಿಕ ನುಡಿಗಳನ್ನಾಡಿದ ಎಚ್.ಡಿ. ಉದಯಶಂಕರ ಶಾಸ್ತ್ರಿ (ನಿಂತವರು) ಎಸ್.ವಿ ಶ್ರೀನಿವಾಸರಾವ್ ದಂಪತಿಗಳು (ಕುಳಿತವರು), ಕಾರ್ಯಕ್ರಮದ ಮೊದಲಿಗೆ ರಾಧಿಕಾ ಪೊದುವಾಳ್ ಆರಂಭಗೀತೆ ಹಾಡಿದರು.

"ಮಕ್ಕಳ ಮನಸ್ಸಿಗೆ ನಾಟುವ ಸಾಹಿತ್ಯ ರಚನೆ ಆಗಬೇಕಿದೆ. ಸಾಹಿತಿಗಳು ರಚನೆ ಮಾಡುವ ಸಾಹಿತ್ಯ ಅವರ ಸಾಹಿತ್ಯಾಸಕ್ತಿಯನ್ನು ಇಮ್ಮಡಿಗೊಳಿಸುವಂತಿರಬೇಕು. ಪ್ರತಿಯೊಬ್ಬ ಮಗುವಿನ ಮೇಲೆ ಪ್ರಭಾವ ಬೀರುವ ಸಾಹಿತ್ಯ ರಚನೆ ಮಾಡುವುದು ಕಷ್ಟ. ಮಕ್ಕಳಿಗೆ ಸಾಹಿತ್ಯ ಅರ್ಥ ಹಾಗೂ ಇಷ್ಟವಾಗುವಂತಿರಬೇಕು. ಅಂತಹ ರಚನೆ ಇಂದಿನ ದಿನಗಳಲ್ಲಿ ಕಷ್ಟವೆನಿಸಿದರೂ ಶ್ರೀನಿವಾಸರಾವ್ ಅವರು ಮಕ್ಕಳ ಸಾಹಿತ್ಯದಲ್ಲಿ ಸಾಕಷ್ಟು ಕೃಷಿ ಮಾಡಿ ಅವರ ಮನದಲ್ಲಿ ಹಚ್ಚಹಸಿರಾಗಿ ಉಳಿದಿದ್ದಾರೆ".

**–ಅಬ್ದುಲ್ ಬಷೀರ್**

(ಅಭಿನಂದನಾ ನುಡಿಗಳಿಂದ ಆಯ್ದಭಾಗ)



ಇಂದ್ರ ಧನಷುಗಳಿಳಿದು ದಿಶೆಗಳ ಏಳು ಬಣ್ಣದಿ ತೊಳೆದಿವೆ।
ಇಬ್ಬನಿಯ ಮಣಿಮಣಿಗಳೊಳಗಡೆ ಹಗಲ ಚಿಕ್ಕೆಯ ಮಿನುಗಿವೆ॥

–ಎಚ್.ಎಸ್.ಶಿವಪ್ರಕಾಶ್





## ಮೇ ಮಾಸದ ತಿಂಗಳ ಅತಿಥಿ




ದಿ:೨೦.೦೫.೨೦೧೪ರಂದು ಹಮ್ಮಿಕೊಂಡ ಮೇ ಮಾಸದ ತಿಂಗಳ ಅತಿಥಿ ಕಾರ್ಯಕ್ರಮದಲ್ಲಿ ಶಿಕ್ಷಣತಜ್ಞ ಪ್ರೊ.ಕೆ.ಇ.ರಾಧಾಕೃಷ್ಣ ಅವರು 'ಜನ್ನ ಮತ್ತು ಆಧುನಿಕ ಮನಃಶಾಸ್ತ್ರ' ವಿಚಾರ ಕುರಿತು ಉಪನ್ಯಾಸ ನೀಡಿದರು. ಕಾರ್ಯಕ್ರಮ ನಿರೂಪಿಸಿದ ಎಂ.ಆಶಾಲತಾ, ಅಧ್ಯಕ್ಷತೆ ವಹಿಸಿದ್ದ ವಿಜಯಾ ಶ್ರೀಧರ್ ಮತ್ತು ಸ್ವಾಗತ ಕೋರಿದ ಎಚ್.ಎನ್.ಶ್ರೀಲಕ್ಷ್ಮೀ ಚಿತ್ರದಲ್ಲಿದ್ದಾರೆ.

# ಜನ್ನನ ಕಾವ್ಯದಲ್ಲಿ ಮನಃಶಾಸ್ತ್ರದ ಬೇರು

• ಪ್ರೊ. ಕೆ.ಇ.ರಾಧಾಕೃಷ್ಣ

ಯಶೋಧರ ಚರಿತೆಯಲ್ಲಿ ಮನುಷ್ಯನ ತೊಳಲಾಟ, ಕಳವಳ ಆತಂಕಗಳನ್ನು ಜನ್ನ ವಿವರಿಸಿದ್ದಾನೆ. ಮನುಷ್ಯನ ಚಿಂತನಾಕ್ರಮವನ್ನು ವಿಸ್ತಾರವಾಗಿ ತಿಳಿಸುವ ಮೂಲಕ ಮನಃಶಾಸ್ತ್ರಜ್ಞನಂತೆ ಸಂದರ್ಭವನ್ನು ಚಿತ್ರಿಸಿದ್ದಾನೆ. ಹೀಗಾಗಿ ಮನಃಶಾಸ್ತ್ರ ಒಂದು ನಿಶ್ಚಿತ ಪರಿಧಿಯ ವ್ಯಾಪ್ತಿಗೆ ಒಳಪಟ್ಟಿದ್ದು ೫೦೦ ವರ್ಷಗಳ ಹಿಂದೆಯೇ ಎನ್ನಬಹುದು.

ವ್ಯಕ್ತಿಯ ಮನಸ್ಥಿತಿಯನ್ನು ಮಾಪನ ಮಾಡುವಂತಹ ಖಿನ್ನತೆ, ದುಃಖ, ಸಂತೋಷವನ್ನು ಸಾಂವಿಧಾನಿಕ ಚೌಕಟ್ಟಿಗೆ ಸಿಗುವಂತೆ ಯಶೋಧರ ಚರಿತೆಯಲ್ಲಿ ಕವಿಜನ್ನ ವಿವರಿಸಿದ್ದಾನೆ. ಇದನ್ನು ಗಮನಿಸಿದರೆ ಜನ್ನ ಆ ಸಂದರ್ಭದಲ್ಲಿಯೇ ಮನಃಶಾಸ್ತ್ರವನ್ನು ಅಧ್ಯಯನ ಮಾಡಿದ್ದ ಎಂಬುದು ತಿಳಿದು ಬರುತ್ತದೆ.

ಕೌಟುಂಬಿಕ ಸಂಬಂಧಗಳು ಶಿಥಿಲವಾಗುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಜನ್ನ ತನ್ನ ಕಾವ್ಯಗಳಲ್ಲಿ ಕಟ್ಟಿಕೊಟ್ಟಿರುವ ಮಾನವ ಸಂಬಂಧಗಳು ಹೆಚ್ಚು ಆಸಕ್ತಿ ಹುಟ್ಟಿಸುತ್ತವೆ. ಆದರೆ ಇಂದು ಎಲ್ಲಾ ಕ್ಷೇತ್ರದಲ್ಲೂ ನಿರ್ವಹಣೆ ಕುರಿತು ವ್ಯಾಪಕ ಚರ್ಚೆಯಾಗುತ್ತಿದ್ದು ಮಾನವ ಸಂಬಂಧಗಳ ನಿರ್ವಹಣೆ ಕುರಿತು ಚರ್ಚೆ ನಡೆಯುತ್ತಿಲ್ಲ. ಮನುಷ್ಯ ಸಂಬಂಧದ ಮೂಲ ದ್ರವ್ಯವೇ ಗಂಡು ಹೆಣ್ಣಿನ ಸಂಬಂಧ ಪ್ರಾಣಿಗಳಲ್ಲಿ ಸೃಷ್ಟಿಗಾಗಿಯೇ ಗಂಡು ಹೆಣ್ಣಿನ ಸಂಬಂಧ ಏರ್ಪಟ್ಟರೆ, ಬುದ್ದಿವಂತನಾದ ಮನುಷ್ಯನಲ್ಲಿ ಶಾರೀರಿಕ ಸಂಬಂಧ ಎಂಬುದು ಭಾವನೆಗಳು ಹಾಗೂ ಮನಸ್ಸನ್ನು ನಿಯಂತ್ರಿಸುವ, ಮಾರ್ಗದರ್ಶಿಸುವ ನೆಲೆಗಟ್ಟಾಗಿದೆ. ಕವಿ ಜನ್ನ ಅನಾದಿಕಾಲದಿಂದಲೂ ಸಂಕೀರ್ಣವಾಗಿರುವ ಮನುಷ್ಯ ಸಂಬಂಧಗಳ ಬಗ್ಗೆ ಕಾವ್ಯಾತ್ಮಕವಾಗಿ ವಿವರಿಸಿ, ಸಂಬಂಧಗಳ ಬಗ್ಗೆ ಮತ್ತಷ್ಟು ಆಸಕ್ತಿ ಕೆರಳುವಂತೆ ಮಾಡುತ್ತಾನೆ. ಪಂಪ ಮತ್ತು ಕುಮಾರವ್ಯಾಸನಿಗೆ ಹೋಲಿಸಿದರೆ ಜನ್ನನ ಕಾವ್ಯಗಳು ಹೆಚ್ಚು ರಸವತ್ತಾಗಿವೆ. ವೀರಬಲ್ಲಾಳನ ಆಸ್ಥಾನಕವಿಯಾಗಿದ್ದ ಜನ್ನ ಮನುಷ್ಯನ ಮನಸ್ಸಿನ ತೊಳಲಾಟಗಳನ್ನು, ಆತಂಕಗಳನ್ನು ತನ್ನ ಕಾವ್ಯದಲ್ಲಿ ಸ್ವಾರಸ್ಯಕರವಾಗಿ ಕಟ್ಟಿಕೊಟ್ಟಿದ್ದಾನೆ. ಇದರೊಂದಿಗೆ ಮನುಷ್ಯನ ಸಂಕುಚಿತತೆಯನ್ನು ವಿಷದವಾಗಿ ತಿಳಿಸಿದ್ದಾನೆ. (ಜನ್ನ ಮತ್ತು ಆಧುನಕ ಮನಃಶಾಸ್ತ್ರ ಕುರಿತ ಉಪನ್ಯಾಸದಿಂದ ಆಯ್ದ ಭಾಗ.) ◆

ತಮ್ಮ ಕಾವ್ಯ ಮತ್ತು ನಾಟಕಗಳಿಂದ ಕನ್ನಡ ಸಾಹಿತ್ಯಲೋಕದಲ್ಲಿ ಪ್ರಸಿದ್ಧರಾಗಿರುವ ಎಚ್.ಎಸ್.ಶಿವಪ್ರಕಾಶ್ ಅವರು ಅನುವಾದಕರಾಗಿಯೂ ಅಂಕಣಕಾರರಾಗಿಯೂ ಆ ಕ್ಷೇತ್ರಗಳಲ್ಲಿ ತಮ್ಮದೇ ಛಾಪು ಮೂಡಿಸಿದವರು. ಮಿಲರೇಪ, ಮಳೆ ಬಿದ್ದ ನೆಲದಲ್ಲಿ, ಮತ್ತೆ ಮತ್ತೆ, ಅಣು ಕ್ಷಣ ಚರಿತೆ,ಮಳೆಯ ಮಂಟಪ,ಮಬ್ಬಿನ ಹಾಗೆ ಕಣಿವೆಯಾಸಿ ಮತ್ತು ಮಾತು ಮಂತ್ರವಾಗುವವರೆಗೆ ಶಿವಪ್ರಕಾಶರ ಪ್ರಮುಖ ಕವನ ಸಂಕಲನಗಳು. ಮಹಾಚೈತ್ರ,ಸುಲ್ತಾನ್ ಟಿಪ್ಪು, ಮಂಟೇಸ್ವಾಮಿ.ಸತಿ,ಮದುವೆ ಹೆಣ್ಣು ನಾಟಕಗಳು. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತರಾಗಿರುವ ಶಿವಪ್ರಕಾಶ್ ಅವರು ಪ್ರಸ್ತುತ ಜರ್ಮನಿಯ ಬರ್ಲಿನ್‌ನಲ್ಲಿರುವ ರವಿಂದ್ರನಾಥ ಟ್ಯಾಗೋರ್ ಕೇಂದ್ರದ ನಿರ್ದೇಶಕರಾಗಿದ್ದಾರೆ. ಅವರ ಸಮಗ್ರ ಕಾವ್ಯ ಸಂಪುಟ'ಕವಿತೆ: ಇಂದಿನ ತನಕ'ದಿಂದ 'ನವಿಲು ಹೆಜ್ಜೆ'ಗೆ ಸಾಲುಗರಿಗಳನ್ನು ಆಯ್ದುಕೊಳ್ಳಲಾಗಿದೆ.◆







ಲೋಕವಾದೆನು ನಿನಗೆ ಒಲವೇ ನನಗೆ ನೀನೇ ನಾಕವು।
ಎರಡು ಲೋಕಗಳೊಂದೇ ಆದವು ಒಳಗೂ ಹೊರಗೂ ಏಕವು॥

–ಎಚ್.ಎಸ್.ಶಿವಪ್ರಕಾಶ್

ತೀ.ನಂ.ಶ್ರೀ ಸಾಹಿತ್ಯ ವಿಮರ್ಶೆ ಪ್ರಶಸ್ತಿ ಪ್ರಧಾನ

# ಶಿವಮೊಗ್ಗ ಕರ್ನಾಟಕ ಸಂಘದ ಚಾರಿತ್ರ್ಯ ದೊಡ್ಡದು




ದಿ. ೨೧.೦೬.೨೦೧೪ ರಂದು ಹಮ್ಮಿಕೊಂಡ ಕಾರ್ಯಕ್ರಮದಲ್ಲಿ ೨೦೧೩ ನೇ ಸಾಲಿನ ವಿಮರ್ಶಾ ಕ್ಷೇತ್ರದಲ್ಲಿನ ಜೀವಮಾನ ಸಾಧನೆಗಾಗಿನ ತೀ.ನಂ.ಶ್ರೀ ಪ್ರಶಸ್ತಿಯನ್ನು ಸ್ವೀಕರಿಸಿ ಪ್ರೊ. ಜಿ.ಎಚ್. ನಾಯಕರವರು ಮಾತನಾಡಿದರು. ಪ್ರೊ. ಡಿ.ಎಸ್. ಮಂಜುನಾಥ, ಡಾ. ತೀ.ನಂ. ಶಂಕರನಾರಾಯಣ, ಸಿರ್ಸಿ ಕೃಷ್ಣಮೂರ್ತಿ, ಜಿ.ಪಿ. ಬಸವರಾಜು, ಮತ್ತು ಎಚ್.ಎನ್. ಶ್ರೀಲಕ್ಷ್ಮಿ ಚಿತ್ರದಲ್ಲಿದ್ದಾರೆ.

**• ಜಿ.ಎಚ್ ನಾಯಕ**

ತೀ.ನಂ.ಶ್ರೀಕಂಠಯ್ಯ, ಡಿ.ಎಲ್.ನರಸಿಂಹಾಚಾರ್ ಶ್ರೇಷ್ಠ ಗುರುಪರಂಪರೆಗೆ ಸೇರಿದವರು. ಇಂಥವರ ಶಿಷ್ಯನಾಗಿದ್ದುದು ನನ್ನ ಸೌಭಾಗ್ಯ. ಶಿಷ್ಯರ ಭಿನ್ನಾಭಿಪ್ರಾಯಗಳನ್ನು ಸಹನೆಯಿಂದ ಆಲಿಸುವ ದೊಡ್ಡ ಗುಣ ಇವರಲ್ಲಿತ್ತು. ತೀ.ನಂ.ಶ್ರೀ ಅವರು ರಚಿಸಿದ ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ನವೋದಯ ಸಾಹಿತ್ಯದ ಗೈರುಹಾಜರಿಯ ಬಗ್ಗೆ ನಾನಾಗಲೇ ತಕರಾರು ಎತ್ತಿದ್ದೆ. ರಸಾನುಭವದ ಕುರಿತೂ, ಶೀಲ–ಅಶ್ಲೀಲದ ವ್ಯಾಖ್ಯಾನಗಳ ಕುರಿತೂ ನನಗೆ ಪ್ರಶ್ನೆಗಳಿದ್ದವು. ಅದನ್ನು ತೀ.ನಂ.ಶ್ರೀ ಬಳಿಯೂ ಚರ್ಚಿಸಿದ್ದೆ. ಇದನ್ನೆಲ್ಲ ಗಮನಿಸಿಯೂ ಭಾರತೀಯ ಕಾವ್ಯ ಮೀಮಾಂಸೆ ಕನ್ನಡದ ಶ್ರೇಷ್ಠ ಕೃತಿ. ಇಂಥಹ ಇನ್ನೊಂದು ಕೃತಿ ಕನ್ನಡದಲ್ಲಿ ಬಂದಿಲ್ಲ. ಕುವೆಂಪು ಅವರು ಹೇಳಿದಂತೆ ಇದು ಆಚಾರ್ಯ ಕೃತಿಯೇ ಹೌದು. ನಾಡಿನ ಕರ್ನಾಟಕ ಸಂಘಗಳಲ್ಲೆಲ್ಲ ಶಿವಮೊಗ್ಗ ಕರ್ನಾಟಕ ಸಂಘದ ಚಾರಿತ್ರ್ಯ ದೊಡ್ಡದು. ಈ ಸಂಘದ ನನ್ನ ಗುರುಗಳ ಹೆಸರಿನ ಈ ಪ್ರಶಸ್ತಿ ಪಡೆಯುವಾಗ ಸಂಕೋಚ ಮತ್ತು ಸಂತೋಷದ ಸಮ್ಮಿಶ್ರ ಭಾವ ನನ್ನಲ್ಲಿ ತುಂಬಿಕೊಂಡಿದೆ. **(ಪ್ರಶಸ್ತಿ ಸ್ವೀಕರಿಸಿ ಮಾಡಿದ ಭಾಷಣದಿಂದ)**◆

## 'ಯೂನಿವರ್ಸಿಟಿಯ ಕೆಲಸವಿಲ್ಲದಿದ್ದರೆ ಬೋಂಡಾ ಮಾರಿ ಬದುಕು ನಡೆಸೋಣ'

ತಮ್ಮ ಗುರುಗಳನ್ನು ನೆನೆದು ಜಿ.ಎಚ್ ನಾಯಕರು ಕಾರ್ಯಕ್ರಮದುದ್ದಕ್ಕೂ ಭಾವುಕರಾಗಿ ಮಾತನಾಡಿದರು. ಅವರು ಭಾವುಕರಾಗಲು ಕಾರಣವಾದ ಇನ್ನೊಂದು ಅಂಶವೆಂದರೆ ತಮ್ಮ ಜೀವನಕ್ಕೆ ಹೆಗಲೆಣೆಯಾಗಿ ಬಂದ ಬಾಳಸಂಗಾತಿ ಮೀರಾ ಅವರು ಸಭೆಯಲ್ಲಿದ್ದುದು ಮತ್ತು ಕರ್ನಾಟಕ ಸಂಘ ನಾಯಕರ ಜೊತೆ ಮೀರಾ ಅವರನ್ನು ಅಭಿನಂದಿಸಿದ್ದು. ಹಲವು ದಶಕಗಳ ಹಿಂದೆ ತಾವು ಕೇಂದ್ರ ಸಾಹಿತ್ಯ ಅಕಾಡೆಮಿಯ ಕೋರಿಕೆಯಂತೆ ನವ್ಯ ಸಾಹಿತ್ಯದ ಮೇಲೆ ಬರೆದ ವಿಮರ್ಶೆಯ ಕುರಿತು ತೀವ್ರ ಟೀಕೆಗಳು ಬಂದ ಹಿನ್ನೆಲೆಯಲ್ಲಿ ಮತ್ತು ತಮ್ಮ ಅಭಿಪ್ರಾಯಗಳನ್ನು ಹಿಂತೆಗೆದುಕೊಳ್ಳಬೇಕೆಂಬ ಒತ್ತಡ ಬಂದಾಗ ತಮ್ಮ ಪರ ನಿಂತ ಜಿ.ಎಸ್. ಎಸ್ ಮತ್ತು ಅನಂತಮೂರ್ತಿ ಅವರನ್ನು ನಾಯಕರು ನೆನೆಸಿಕೊಂಡರು. ಮುಖ್ಯವಾಗಿ, ತನ್ನ ನಿಷ್ಠುರತೆಗೆ ಬದ್ಧನಾಗಿರಬೇಕಾದ ಇಂಥಹ ಸಂದರ್ಭದಲ್ಲಿ, ತಮ್ಮ ಬಾಳಸಂಗಾತಿ ಮೀರಾ ಅವರು ' ನಿಮ್ಮ ನಿಲುವುಗಳಿಗೆ ಬದ್ಧರಾಗಿರಿ, ಆತ್ಮವಂಚನೆ ಮಾಡಿಕೊಳ್ಳಬೇಕಾದ ಅಗತ್ಯವಿಲ್ಲ, ಯೂನಿವರ್ಸಿಟಿಯ ಕೆಲಸವಿಲ್ಲದಿದ್ದರೆ ಬೋಂಡಾ ಮಾರಿ ಬದುಕು ನಡೆಸೋಣ' ಎಂದು ನೀಡಿದ ಸ್ಥೈರ್ಯ ಮತ್ತು ಬೆಂಬಲವನ್ನು ಸ್ಮರಿಸಿಕೊಂಡರು.



ಮಲ್ಲಿಗೆ ಹೂವಿನ ಚಂದದ ಚೆಲುವೆ ಮೆಲ್ಲಗೆ ನುಡಿಯೆ ಎಲ್ಲಿಗೆ ಹೊರಟೆ?
ನಲ್ಲನ ಮನೆಗೆ, ನಲ್ಲನ ಮನೆಗೆ ನಲ್ಲುಗು ನನಗು ಈ ದಿನ ಮದುವೆ
–ಎಚ್.ಎಸ್.ಶಿವಪ್ರಕಾಶ್





# ಸಾಹಿತ್ಯದೊಂದಿಗೆ ಜೀವನದ ಮೌಲ್ಯಗಳಿಗೂ ಗೌರವ





ದಿ. ೨೧.೦೬.೨೦೧೪ ರಂದು ಹಮ್ಮಿಕೊಂಡ ಕಾರ್ಯಕ್ರಮದಲ್ಲಿ ೨೦೧೩ ನೇ ಸಾಲಿನ ವಿಮರ್ಶಾ ಕ್ಷೇತ್ರದಲ್ಲಿನ ಜೀವಮಾನ ಸಾಧನೆಗಾಗಿನ ತೀ.ನಂ.ಶ್ರೀ ಪ್ರಶಸ್ತಿಯನ್ನು ಪ್ರೊ.ಜಿ.ಎಚ್. ನಾಯಕ ಅವರಿಗೆ ಸಂಘದ ಪೂರ್ವಾಧ್ಯಕ್ಷರಾದ ಡಾ.ತೀ.ನಂ. ಶಂಕರನಾರಾಯಣ ಅವರು ಪ್ರದಾನ ಮಾಡಿದರು. ಈ ಸಂದರ್ಭದಲ್ಲಿ ನಾಯಕರ ಶ್ರೀಮತಿಯವರಾದ ಮೀರಾ ನಾಯಕ ಅವರನ್ನೂ ಅಭಿನಂದಿಸಲಾಯಿತು. ಡಾ.ಎಚ್.ಎಸ್. ನಾಗಭೂಷಣ, ಕಾರ್ಯಕ್ರಮ ನಿರೂಪಿಸಿದ ಪ್ರೊ.ಡಿ.ಎಸ್. ಮಂಜುನಾಥ, ಅಭಿನಂದನಾ ನುಡಿಗಳನ್ನಾಡಿದ ಸಾಹಿತಿಗಳಾದ ಜಿ.ಪಿ. ಬಸವರಾಜು, ಪ್ರಾಸ್ತಾವಿಕ ಮಾತುಗಳನ್ನಾಡಿದ ಸಿರ್ಸಿ ಕೃಷ್ಣಮೂರ್ತಿ, ಸ್ವಾಗತ ಕೋರಿದ ಎಚ್.ಎನ್. ಶ್ರೀಲಕ್ಷ್ಮಿ ಚಿತ್ರದಲ್ಲಿದ್ದಾರೆ.

• ಜಿ.ಪಿ.ಬಸವರಾಜು

ಇತ್ತೀಚಿನ ದಿನಗಳಲ್ಲಿ ಪ್ರಶಸ್ತಿಗಳು ವಿವಾದಗಳಿಗೆ ಗ್ರಾಸವಾಗುತ್ತಿವೆ. ನಮ್ಮ ಸಮಾಜ ಈ ಪ್ರಶಸ್ತಿಗಳನ್ನು ಹೇಗೆ ನೋಡುತ್ತದೆ ಎನ್ನುವುದರ ಮೇಲೆ ಈ ವಿವಾದಗಳು ಸೃಷ್ಟಿಯಾಗುತ್ತವೆ. ಸಾಹಿತಿಯ ಸಾಹಿತ್ಯ ಮತ್ತು ಆತನ ನಡವಳಿಕೆಗಳ ನಡುವೆ ಅಂತರವಿದ್ದಾಗ ವಿವಾದಗಳು ಸೃಷ್ಟಿಯಾಗುತ್ತವೆ ಎಂದು ನಾನು ಗ್ರಹಿಸಿದ್ದೇನೆ. ಆದರೆ ಹೀಗೆ ವಿವಾದಗಳಿಲ್ಲದೆ ಪ್ರಶಸ್ತಿ ಪಡೆದ ಹಲವರು ನಮ್ಮಲ್ಲಿದ್ದಾರೆ. ಅಂಥವರ ಸಾಲಿನಲ್ಲಿ ಜಿ.ಎಚ್ ನಾಯಕರಿದ್ದಾರೆ.

ನಾಯಕರು ಪ್ರಶಸ್ತಿಯನ್ನು ಒಪ್ಪಿಕೊಳ್ಳುವಾಗಲೂ ಹತ್ತು ಬಾರಿ ಯೋಚಿಸುವಂಥವರು. ಪ್ರಶಸ್ತಿಯ ಮಾನದಂಡಗಳು ಸರಿಯಾಗಿದ್ದಾಗ ಮಾತ್ರ ನಾಯಕರು ಅದಕ್ಕೆ ಒಪ್ಪಿಕೊಳ್ಳುತ್ತಾರೆ.

ಜಿ.ಎಚ್. ನಾಯಕರದು ಕೇವಲ ಸಾಹಿತ್ಯ ವಿಮರ್ಶೆ ಮಾತ್ರವಲ್ಲ. ಅದು ಜೀವನ ವಿಮರ್ಶೆಯೂ ಹೌದು. ಅವರು ಸಾಹಿತ್ಯದಷ್ಟೇ ಜೀವನದ ಮೌಲ್ಯಗಳಿಗೂ ಬೆಲೆ ಕೊಡುವವರು. ಸತ್ಯನಿಷ್ಠೆ ಇಟ್ಟುಕೊಂಡವರು. ಶೀಲಶುದ್ಧವಾಗಿರಬೇಕು ಎನ್ನುವ ನಿಲುವು ಅವರದು. ಜೀವನದುದ್ದಕ್ಕೂ ಅದನ್ನು ಅವರು ಪಾಲಿಸಿಕೊಂಡು ಬಂದಿದ್ದಾರೆ. (ಅಭಿನಂದನಾ ನುಡಿಗಳಿಂದ)◆

# ಸಾಹಿತ್ಯ ಪ್ರಚಾರೋಪನ್ಯಾಸ




ದಿ.೧೦.೦೪.೨೦೧೪ ರಂದು ತೀರ್ಥಹಳ್ಳಿಯ ತುಂಗಾ ಮಹಾವಿದ್ಯಾಲಯದ ಸಹಯೋಗದಲ್ಲಿ ಅಲ್ಲಿಯ ವಜ್ರಮಹೋತ್ಸವ ಸಭಾಂಗಣದಲ್ಲಿ ಹಮ್ಮಿಕೊಂಡ ಸಾಹಿತ್ಯ ಪ್ರಚಾರೋಪನ್ಯಾಸ ಕಾರ್ಯಕ್ರಮದಲ್ಲಿ ಕರ್ನಾಟಕ ಸಂಘದ ಉಪಾಧ್ಯಕ್ಷರಾದ ಹೆಚ್.ಡಿ.ಉದಯಶಂಕರ ಶಾಸ್ತ್ರಿ ಅವರು ಪ್ರಾಸ್ತಾವಿಕವಾಗಿ ಮಾತನಾಡಿದರು. ಕರ್ನಾಟಕ ಸಂಘದ ನಿರ್ದೇಶಕರಲ್ಲೊಬ್ಬರಾದ ಬಿ.ಟಿ. ಅಂಬಿಕ, ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಪ್ರಾಂಶುಪಾಲರೂ, ಕತೆಗಾರರೂ ಆದ ಪ್ರೊ.ಡಿ.ಎಸ್. ಸೋಮಶೇಖರ್, ಪ್ರಧಾನ ಉಪನ್ಯಾಸ ಮಾಡಿದ ವಿಮರ್ಶಕರಾದ ಡಾ.ಸಬಿತಾ ಬನ್ನಾಡಿ, ಸ್ವಾಗತ ಕೋರಿದ ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರೂ ಲೇಖಕರೂ ಆದ ಡಾ.ಎಲ್.ಸಿ ಸುಮಿತ್ರ ಚಿತ್ರದಲ್ಲಿದ್ದಾರೆ. (ಉಪನ್ಯಾಸದ ಲೇಖನ ರೂಪ ಪುಟ ಸಂ. ೧೨-೧೩ರಲ್ಲಿದೆ)

# ಪಂಪನ ಕಾವ್ಯಕ್ಕೆ ಕೈ ದೀವಿಗೆ

• ಲಕ್ಷ್ಮಣ ಕೊಡಸೆ

ಬಿ. ವೀರಭದ್ರಪ್ಪ ಅವರ 'ಪಂಪ ಪದಪ್ರಪಂಚ' ಆಶ್ಚರ್ಯ ಹುಟ್ಟಿಸುವಷ್ಟು ವಿಶಿಷ್ಟವಾದ ಕೃತಿ. ಶೀರ್ಷಿಕೆಯೇ ಸೂಚಿಸುವಂತೆ 'ಪಂಪ ಭಾರತ'ದಲ್ಲಿ ಬಳಕೆಯಾದ ಪದಗಳ ಅರ್ಥಗಳನ್ನು ವಿವರಿಸುವ ಪ್ರಯತ್ನಗಳು ಇದರಲ್ಲಿವೆ. ಕನ್ನಡದಲ್ಲಿ ಎಂ ಎ ಪದವಿ ಗಳಿಸಿದ್ದವರು ವೀರಭದ್ರಪ್ಪನವರು. ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲೂಕಿನ ತಿಪ್ಪಗೊಂಡನಹಳ್ಳಿಯವರು. ಹುಟ್ಟೂರಿನಲ್ಲಿ ಶಾಲೆ ಆರಂಭವಾದಾಗ ಶಿಕ್ಷಕರಾಗಿ ಉಚಿತ ಸೇವೆ ಸಲ್ಲಿಸಿದ ಸಹೃದಯಿ. ನಂತರ ಚಿತ್ರದುರ್ಗದ ಸಿದ್ದೇಶ್ವರ ಪ್ರೌಢಶಾಲೆಯಲ್ಲಿ ಅಧ್ಯಾಪಕರಾದರು. ಸಂತೇಬೆನ್ನೂರು ಸರ್ಕಾರಿ ಕಾಲೇಜಿಗೆ ಉಪನ್ಯಾಸಕರಾಗಿ ಸೇರಿಕೊಂಡರೂ ಪದವಿ ತರಗತಿಗಳಿಗೆ ಬೋಧಿಸುವ ಉದ್ದೇಶದಿಂದ ಸರ್ಕಾರಿ ಕಾಲೇಜಿನ ಕೆಲಸ ಬಿಟ್ಟು ಸಾಗರದ ಲಾಲ್ ಬಹದ್ದೂರ್ ಶಾಸ್ತ್ರಿ ಕಾಲೇಜು ಸೇರಿದರು. ಅಲ್ಲಿ ಕೆಲವೇ ವರ್ಷಗಳ ಸೇವೆಯ ನಂತರ ಕೆಲಸ ಕಳೆದುಕೊಂಡರು. ಈ ಅವಸ್ಥೆಯಲ್ಲಿ ಆಸ್ತಮಾ ಕಾಹಿಲೆಗೆ ತುತ್ತಾದರು. ಸುಮಾರು ೧೧ ವರ್ಷ ರಾಜ್ಯದ ವಿವಿಧ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯಬೇಕಾಯಿತು. ಗುಣವಾದ ಬಳಿಕ ಹತ್ತು ವರ್ಷ ಕೃಷಿ ಮತ್ತು ಸಾಹಿತ್ಯ ಕೃಷಿಯಲ್ಲಿ ತೊಡಗಿಕೊಂಡರು.

ಹತ್ತು ವರ್ಷಗಳ ಅವಧಿಯಲ್ಲಿ 'ಪಂಪ ಭಾರತ'ದ ಮೇಲೆ ಐವತ್ತಕ್ಕೂ ಹೆಚ್ಚು ಸಂಶೋಧನಾ ಲೇಖನಗಳನ್ನು ಬರೆದರು. ಎರಡು ಕಾದಂಬರಿ, ೧೫೦ಕ್ಕೂ ಹೆಚ್ಚು ಕವಿತೆಗಳು, ಹಲವು ಸಣ್ಣ ಕತೆಗಳು, ಒಂದು ಗೀತನಾಟಕ ಅವರ ಸಾಹಿತ್ಯ ಕೃಷಿ. 'ಪಂಪ ಪದಪ್ರಪಂಚ' ವಿಕ್ರಮಾರ್ಜುನ ವಿಜಯಂ ಕಾವ್ಯದಲ್ಲಿರುವ ಅನೇಕ ಕ್ಲಿಷ್ಟಪದಗಳಿಗೆ ಅರ್ಥ ಹೇಳಿ ಪದ್ಯಗಳಿಗೆ ವಿನೂತನವಾದ ವ್ಯಾಖ್ಯಾನ ಮಾಡುವ ಪ್ರಯತ್ನ.

ಒಂದೂವರೆ ಸಾವಿರ ವರ್ಷಗಳಷ್ಟು ಸುದೀರ್ಘವಾದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚಂಪೂಯುಗ ಹಳೆಗನ್ನಡ ಸಾಹಿತ್ಯದಲ್ಲಿ ಸುವರ್ಣ ಕಾಲ. ಪಂಪ, ರನ್ನ, ಪೊನ್ನ, ನಾಗವರ್ಮ, ಹರಿಹರ ಮೊದಲಾದ ಕವಿಗಳ ಚಂಪೂಕಾವ್ಯಗಳು ಗಾತ್ರದಲ್ಲಿ ಮಾತ್ರವಲ್ಲದೆ, ಸತ್ವದಲ್ಲಿಯೂ ಕನ್ನಡದ ಪ್ರಾಚೀನ ಸಾಹಿತ್ಯ ಶ್ರೀಮಂತಿಕೆಯನ್ನು ಬಿಂಬಿಸುತ್ತವೆ. ರಾಮಾಯಣ, ಮಹಾಭಾರತ, ಭಾಗವತ ಮತ್ತು ಜೈನ ಮಹಾಪುರಾಣದ ಆಕರಗಳನ್ನು ಆಧರಿಸಿದ್ದರೂ ಸ್ವಂತ ಪ್ರತಿಭೆಯಿಂದ ಅವುಗಳ ಅರ್ಥ ವಿಸ್ತರಣೆ ಮಾಡಿರುವುದು ಈ ಕವಿಗಳ ಹೆಗ್ಗಳಿಕೆ. ಪಂಪ ಕವಿ ಈಗ ಉಪಲಬ್ಧವಿರುವ ಪ್ರಾಚೀನ ಸಾಹಿತ್ಯ ಕೃತಿಗಳ ದೃಷ್ಟಿಯಿಂದ ಕನ್ನಡದ ಆದಿಕವಿ ಎಂಬ ಗೌರವಕ್ಕೆ ಪಾತ್ರನಾದವನು. ತನ್ನ ಎರಡು ಮಹಾಕಾವ್ಯಗಳಿಗೆ ಮಹಾಭಾರತ ಮತ್ತು ಜೈನ ಮಹಾಪುರಾಣದಿಂದ ವಸ್ತುಗಳನ್ನು ಪಡೆದಿದ್ದರೂ ಹೊಸದೊಂದು ಸಾಹಿತ್ಯ ಪರಂಪರೆಯನ್ನು ಆರಂಭಿಸಿದ ಶ್ರೇಯಸ್ಸು ಪಂಪನದು. ತನ್ನ ಆಶ್ರಯದಾತನಾದ ಸಾಮಂತರಾಜ ಅರಿಕೇಸರಿಯನ್ನು ಮಹಾಭಾರತದ ಅರ್ಜುನನೊಂದಿಗೆ ಸಮೀಕರಿಸಿ 'ವಿಕ್ರಮಾರ್ಜುನ ವಿಜಯ'ವನ್ನು ('ಪಂಪ ಭಾರತ') ರಚಿಸಿ ಮುಂದಿನ ಕವಿಗಳಿಗೆ ಮಾರ್ಗದರ್ಶಕನಾದವನು.




**ಪಂಪ ಪದಪ್ರಪಂಚ**
ಲೇ: ಬಿ.ವೀರಭದ್ರಪ್ಪ.
ಸಂ: ಡಾ. ಬಿ.ವಿ.ವಸಂತಕುಮಾರ್,
ಪ್ರ: ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.

ಪಂಪ ದೇಸಿ ಮತ್ತು ಮಾರ್ಗ ಶೈಲಿಯ ಸಮನ್ವಯವನ್ನು ತನ್ನ 'ವಿಕ್ರಮಾರ್ಜುನ ವಿಜಯ'ದಲ್ಲಿ ಸಾಧಿಸಿದ್ದಾನೆ; ಆದರೂ ಅವುಗಳ ಸ್ವಾರಸ್ಯವು ಈಗಿನ ಓದುಗರಿಗೆ ಗೊತ್ತಾಗುವುದು ಸುಲಭವಲ್ಲ. ಪ್ರತಿ ಪದ್ಯಗಳನ್ನೂ ಆಧುನಿಕ ಗದ್ಯದಲ್ಲಿ ವಿವರಿಸದಿದ್ದರೆ ಗ್ರಾಹ್ಯವಾಗುವುದು ಕಷ್ಟ. ಈ ಕಷ್ಟ ನಿವಾರಣೆಗಾಗಿ ಕಳೆದ ಶತಮಾನದಿಂದ ಪ್ರಯತ್ನಗಳು ನಡೆದಿವೆ. ಮುಳಿಯ ತಿಮ್ಮಪ್ಪಯ್ಯ ಅವರ 'ನಾಡೋಜ ಪಂಪ', ಡಿ. ಎಲ್.ನರಸಿಂಹಾಚಾರ್ಯರ 'ಪಂಪಭಾರತ ದೀಪಿಕೆ', ಕೆ.ವೆಂಕಟರಾಮಪ್ಪ, ತೀ.ನಂ.ಶ್ರೀಕಂಠಯ್ಯ, ಎಲ್. ಬಸವರಾಜು, ಎನ್. ಅನಂತರಂಗಾಚಾರ್, ಎಚ್.ವಿ.ಶ್ರೀನಿವಾಸ ಶರ್ಮ ಅವರ ಗದ್ಯಾನುವಾದಗಳು ಪಂಪನ ಪದ್ಯಗಳನ್ನು ಅರ್ಥ ಮಾಡಿಕೊಳ್ಳುವಲ್ಲಿ ನೆರವಾಗುವ ಹಲವು ಪ್ರಯತ್ನಗಳು.

ಆದರೆ ಬಿ. ವೀರಭದ್ರಪ್ಪ ಅವರ 'ಪಂಪನ ಪದಪ್ರಪಂಚ' ಈ ಎಲ್ಲ ಕೃತಿಗಳಿಗಿಂತಲೂ ಭಿನ್ನವಾದ ವ್ಯಾಖ್ಯಾನವಾಗಿದೆ. ಅವರು 'ಪಂಪ ಭಾರತ' ಕಾವ್ಯದಲ್ಲಿ ಬಳಕೆಯಾಗಿರುವ ನುಡಿಗಟ್ಟು, ದೇಸಿ ಪದಗಳು ಮತ್ತು ಅಪೂರ್ವ ಪದಗಳನ್ನು ಕುರಿತು ವಿಸ್ತಾರವಾಗಿ, ತೌಲನಿಕವಾಗಿ ಚರ್ಚಿಸಿದ್ದಾರೆ. ಪ್ರಾಯೋಗಿಕ ವಿಮರ್ಶೆಯ ವಿಧಾನವನ್ನು ನೆನಪಿಸುವಂತೆ ಪ್ರತಿ ಪದದ ಬಳಕೆಯ ಹಿನ್ನೆಲೆ, ಔಚಿತ್ಯವನ್ನು ಗುರುತಿಸಿದ್ದಾರೆ. ಹೀಗೆ ಗುರುತಿಸುವ ಮೊದಲು ನಿರ್ದಿಷ್ಟ ಪದದ ಬಗ್ಗೆ ಹಿಂದಿನ ವಿದ್ವಾಂಸರು ನೀಡಿದ ಅರ್ಥವನ್ನು ಚರ್ಚಿಸಿ ಅದು ಎಷ್ಟರಮಟ್ಟಿಗೆ ಔಚಿತ್ಯಪೂರ್ಣವಾಗಿದೆ ಅಥವಾ ಆಗಿಲ್ಲ ಎಂಬುದನ್ನೂ ದಾಖಲಿಸಿದ್ದಾರೆ. ಕವಿಯ ಆಶಯವನ್ನು ಖಚಿತವಾಗಿ ಗುರುತಿಸಲು ನಡೆಸುವ ವೀರಭದ್ರಪ್ಪ ಅವರ ಚರ್ಚೆ ಗಣಿತಶಾಸ್ತ್ರದ ತರ್ಕವನ್ನು ನೆನಪಿಗೆ ತರುತ್ತದೆ. ಕೃತಿಯಲ್ಲಿನ ಆಂತರಿಕ ಸಾಕ್ಷ್ಯ, ಬಾಹ್ಯ ಸಾಕ್ಷ್ಯಗಳನ್ನು ಆಧರಿಸಿ ಬರುವ ತೀರ್ಮಾನಗಳು ಈವರೆಗಿನ ಚರ್ಚೆಯನ್ನು ಒಂದು ತಾರ್ಕಿಕ ಅಂತ್ಯಕ್ಕೆ ಮುಟ್ಟಿಸುವಷ್ಟು ಸಮರ್ಥವಾಗಿ ತೋರುತ್ತವೆ.

ಡಿ.ಎಲ್.ಎನ್, ತೀ.ನಂ.ಶ್ರೀ, ಮುಳಿಯ ತಿಮ್ಮಪ್ಪಯ್ಯ ಮೊದಲಾದ ಮಹಾ ವಿದ್ವಾಂಸರು ಚರ್ಚಿಸಿ ತೀರ್ಮಾನಿಸಲಾಗದೆ ಪ್ರಶ್ನಾರ್ಥಕ ಚಿಹ್ನೆಯನ್ನು ಉಳಿಸಿರುವ ಅನೇಕ ಪದಗಳಿಗೆ ನಿಶ್ಚಿತ ಅರ್ಥವನ್ನು ಶೋಧಿಸಿ ಪಂಪನ ಕಾವ್ಯದ ಆಶಯವನ್ನು ಸಾಮಾನ್ಯ ಓದುಗರೂ ಸರಿಯಾಗಿ ಗ್ರಹಿಸುವಂತೆ ಮಾಡಿರುವುದು ಇಲ್ಲಿನ ವಿಶೇಷ. ಇಂಥ ಪ್ರಯತ್ನಕ್ಕೆ ಬೆರಗು

(ಮುಂದಿನ ಪುಟಕ್ಕೆ)



ಮಲ್ಲಿಗೆ ಬಿಸುಟ ಮಾಂಸವೆ, ಎಲುಬೆ ಮೆಲ್ಲನೆ ಉಸುರೆ– ಎಲ್ಲಿಗೆ ಹೊರಟೆ?
–ಗಂಡನ ಮನದಲಿ ಮುಳ್ಳೆ ತುಂಬಿವೆ ಅಲ್ಲಿಗೆ ನಾ ಕೊಳ್ಳಿಯನಿಕ್ಕುವೆ!
–ಎಚ್.ಎಸ್.ಶಿವಪ್ರಕಾಶ್





# ಬಿಷಪ್‌ರಿಗೆ ಹಸ್ತೋದಕ

• ಗೌರೀಶ ಕಾಯ್ಕಿಣಿ



೫೦ರ ದಶಕದಲ್ಲಿ ನಮ್ಮ ಊರಿನ ಮಹಿಳಾ ಮಂಡಳಿಯ ವಿದ್ಯಮಾನದಲ್ಲಿ ಅಂಬರ ಚರಖಾ ವರ್ಗಗಳೂ ಕಾರ್ಯಾಲಯವೂ ಆರಂಭವಾದವು. ಮುಂಬಯಿಯ ಬಿಷಪ್ ಫಾದರ್ ಲೆಷ್‌ರನ್ನು ಸರ್ವಸೇವಕ ಶ್ರೀ ಶಂಕರರಾವ್ ಗುಲ್ವಾಡಿಯವರು ಈ ಕೇಂದ್ರದ ಉದ್ಘಾಟನೆಗೆ ಕರೆದು ತಂದಿದ್ದರು.

ಬಿಷಪ್ ಲೆಷ್ ಮಹಾ ಗಾಂಧೀಭಕ್ತರು, ಅಪ್ಪಟ ಖಾದಿ ಧಾರಿಗಳು, ಹಿಂದೆ ಮಹಾತ್ಮರ ಚಿತಾಭಸ್ಮವನ್ನು ನಮ್ಮಲ್ಲಿಯ ತಾಮ್ರಪರ್ಣಿ ಕುಂಡದಲ್ಲಿ ವಿಸರ್ಜಿಸಲು ತಂದಾಗ ಅವರೇ ಜೊತೆಗೆ ಬಂದಿದ್ದರು. ಇದೀಗ ಒಂದು ದಶಕದ ನಂತರ ಮತ್ತೊಮ್ಮೆ ಭೆಟ್ಟಿ.

ಬಿಷಪ್ ಲೆಷ್‌ರನ್ನು ನಮ್ಮಲ್ಲಿಯ ಪ್ರಸಿದ್ಧ ಅತಿಥೇಯರೂ ಮಹಾಬಲೇಶ್ವರ ದೇವರ ಮುಖ್ಯ ಅರ್ಚಕರಲ್ಲಿ ಒಬ್ಬರೂ ಆದ ವೇದಮೂರ್ತಿ ಶ್ರೀ ಶೇಷಂಭಟ್ಟ ಮುಳೆಯವರಲ್ಲಿ ಇಳಿಸಲಾಗಿತ್ತು.

ಅಂದು ಶೇಷಂಭಟ್ಟರ ತಂದೆಯವರ ಶ್ರಾದ್ಧದ ದಿನ. ಒಳ ಹಜಾರದಲ್ಲಿ ಬ್ರಾಹ್ಮಣರ ಮಡಿ ಪಂಕ್ತಿ ಊಟಕ್ಕೆ ಕೂತಿತ್ತು. ಹೊರ ಹಜಾರದಲ್ಲಿ ಬಿಷಪ್ ಲೆಷ್‌ರೊಂದಿಗೆ ನಾವೆಲ್ಲ ಕೂತಿದ್ದೆವು. ಆಗ ಶ್ರೀ ಶೇಷಂಭಟ್ಟರು ಒಂದು ಬೆಳ್ಳಿಯ ಗಿಂಡಿ ಹಿಡಿದು ಹೊರಗೆ ಬಂದರು ಮತ್ತು ತಮಗೆ ಬರುವ ತಕ್ಕಮಟ್ಟಿಗಿನ ಇಂಗ್ಲೀಷಿನಲ್ಲಿ ಫಾದರ್ ಲೆಷ್‌ರ ಮುಂದೆ ನಿಂತು ಇಂತೆಂದರು: 'ಸರ್, ಇಂದು ನನ್ನ ತಂದೆಯ ಶ್ರಾದ್ಧ. ತಾವು ಜಗದ್ಗುರುಗಳು. ಶ್ರಾದ್ಧದ ಪಂಕ್ತಿಗೆ ತಾವು ದೊರಕಿದ್ದು ಅಲಭ್ಯ ಲಾಭ. . . ನಮ್ಮ ಭಾಗ್ಯ. ತಾವು ಈ ದಕ್ಷಿಣೆ ಇತ್ತ ವಿಧಿವತ್ತಾಗಿ ಬ್ರಾಹ್ಮಣ ಪೂಜೆ ಮಾಡಿ ಉದ್ದಂಡ ನಮಸ್ಕಾರ ಮಾಡಿದರು! ಈ ಸಾತ್ವಿಕ ಬ್ರಾಹ್ಮಣನ ವಿಶಾಲ ಮಾನವತೆಯ ಪವಿತ್ರ ಭಾವನೆ ಕಂಡು ಫಾದರ್ ಲೆಷ್ ತುಂಬ ಪ್ರಭಾವಿತರಾದರು.

ಈ ನಡುವೆ ರಸಿಕ ಲಹರಿಯ ಶೇಷಂಭಟ್ಟರು ಇನ್ನೊಂದು ಏರ್ಪಾಟು ಮಾಡಿದ್ದರು. ಪಕ್ಕದ ಒಂದು ಚಿಕ್ಕ ಕೋಣೆಯಲ್ಲಿ ನಮ್ಮೂರಿನ ಒಬ್ಬ ಪಿಟೀಲುಗಾರರನ್ನು ಕದ ಇಕ್ಕಿ ಕೂಡ್ರಿಸಿದ್ದರು. ಆತ ನಮ್ಮ ಊಟಕ್ಕೆ ಪಾರ್ಶ್ವಸಂಗೀತ ಒದಗಿಸುತ್ತಿದ್ದ. ಆದರೆ, ಅದರತ್ತ ನಮ್ಮ ಗಮನ ತಪ್ಪಿಹೋಗಿ ಹಾಸ್ಯ ಹರಟೆಗಳ ನಡುವೆ ನಮ್ಮ ಊಟ ನಿಧಾನವಾಗಿ ಸಾಗುತ್ತಾ ಮುಗಿಯಲು ಒಂದು ಒಂದೂವರೆ ತಾಸು ಹಿಡಿಯಿತು.

ಆ ಬಡಪಾಯಿ ಪಿಟೀಲುಗಾರ ಆ ಪುಟ್ಟ ಕೊಠಡಿಯಲ್ಲಿ ಗಾಳಿ-ಬೆಳಕಿಲ್ಲದ ಸೆಕೆಯಿಂದ ಸುಸ್ತಾಗಿ ಬೆವತು ಉಸಿರುಕಟ್ಟಿ ತನ್ನ ವಾದನ ನಿಲ್ಲಿಸಿ 'ಕದ ತೆಗೀರೋ! ನನ್ನ ಹೊರತೆಗಿರೋ!' ಎಂದು ಕೂಗಿಕೊಳ್ಳಹತ್ತಿದ. **(ಕೆ.ವಿ. ಸುಬ್ಬಣ್ಣ ನೆನಪಿನ 'ಮೊದಲ ಓದು ಪುಸ್ತಕ ಮಾಲೆಯ ಗೌರೀಶ ಕಾಯ್ಕಿಣಿ ಅವರ ಆಯ್ದ ಬರಹಗಳು' ಕೃತಿಯಿಂದ. ಪ್ರ- ಅಕ್ಷರ ಪ್ರಕಾಶನ ಹೆಗ್ಗೋಡು)**◆

(ಹಿಂದಿನ ಪುಟದಿಂದ)

# ಪಂಪನ ಕಾವ್ಯಕ್ಕೆ ಕೈ ದೀವಿಗೆ

ಮೂಡುತ್ತದೆ. ಪಂಪ ಭಾರತದ ಮೊದಲನೆಯ ವೃತ್ತದಲ್ಲಿ ಬರುವ 'ಜೀಯನೆ ಬೇಡಿಕೊಳ್ಳದೆ' ಪದ ವೃಂದದ ವ್ಯಾಖ್ಯಾನವನ್ನು ಅವರು ಮಂಡಿಸಿ ವಿಶ್ಲೇಷಿಸಿದ ರೀತಿಯೇ ವಿಸ್ಮಯಕಾರಿಯಾಗಿದೆ. ಪ್ರಖರ ವಿದ್ವತ್ತಿನ ದಿಕ್ಸೂಚಿಯಂತಿದೆ. 'ಮೃಗಯಾ ವ್ಯಾಜದಿನೊರ್ಮೆ.. ವೃತ್ತದಲ್ಲಿ ಬರುವ 'ದಿಬ್ಯಂ ಬಿಡಿವಂತೆವೋಲ್' ಸಂದರ್ಭಕ್ಕೆ ನೀಡಿದ ವ್ಯಾಖ್ಯಾನವೂ ಪ್ರೌಢವಾಗಿದೆ. ಇದೇ ರೀತಿ 'ಸುಪುಷ್ಪಪಟ್ಟ', 'ಕೂಸು', 'ರುಂದ್ರ', 'ಕಿಂಕೊಳೆ', 'ಕೋಳ್ಮೊಗ', 'ಮೇಗು ಮೇಕು', 'ತಕ್ಕೊರ್ಮೆ', 'ಅತ್ತಿಗೆ', 'ದಂಡುರುಂಬೆ', 'ನಕ್ಕರವದ್ದಿ', 'ನೈಷ್ಠಿಕ ಮುಷ್ಟಿ', 'ತೀನಂ', 'ಮೂರಿ', 'ದ್ರಂಗ', 'ಡಂಗ', 'ಅಡಂಗಮ್', 'ಕಾಸಟ', 'ಪದಂಗಾಸಿದ ಪೊನ್ನ ಪುಂಜಿ', 'ಅಲಂಪು', 'ಸಂಬಳಂ', 'ಗೊರವ', 'ಕಳಿಂಚು', 'ಪುಳಿಂಚು', 'ತೊವಲ್' ಮೊದಲಾದ ಪದಗಳು ಪಂಪನ ಕಾವ್ಯದಲ್ಲಿ ಹಾಗೂ ಕನ್ನಡದ ಇತರ ಕಾವ್ಯಗಳಲ್ಲಿ ಬಳಕೆಯಾದ ಸಂದರ್ಭಗಳ ಹಿನ್ನೆಲೆಯಲ್ಲಿ ಅರ್ಥವನ್ನು ಶೋಧಿಸಿರುವುದು ಈ 'ಪದ ಪ್ರಪಂಚ' ಕೃತಿಯ ವೈಶಿಷ್ಟ್ಯವಾಗಿದೆ.

ಪಂಪನ ಕಾವ್ಯವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುವಲ್ಲಿ ಈ ಕೃತಿ ಡಿಎಲ್‌ಎನ್ ಅವರ 'ಪಂಪ ಭಾರತ ದೀಪಿಕೆ'ಯಂತೆಯೇ ಉಪಯುಕ್ತವಾಗಿದೆ. ಪಂಪನನ್ನು ಓದುವವರು, ಪಾಠ ಮಾಡುವವರು, ಸಂಶೋಧನೆ ಮಾಡುವವರು ಅವಶ್ಯಕವಾಗಿ ಗುರುತಿಸಲೇ ಬೇಕಾದ ಕೃತಿಯಾಗಿದೆ. ಮುನ್ನುಡಿಯಲ್ಲಿ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರು 'ವೀರಭದ್ರಪ್ಪನವರು ಈ ಪದಪ್ರಪಂಚದ ಮೂಲಕ ಕರ್ನಾಟಕದ ಸಾಂಸ್ಕೃತಿಕ ಹೊಳಹನ್ನು, ಕಾವ್ಯದ ಅನನ್ಯತೆಯನ್ನು, ಪಂಪನ ಸಮಗ್ರ ದೇಸಿ ತಿಳುವಳಿಕೆಯನ್ನು ಪಡಿಮೂಡಿಸಿದ್ದಾರೆ' ಎಂದು ಹೇಳಿರುವುದು ಪ್ರಶಂಸೆಯ ಔಪಚಾರಿಕ ಮಾತುಗಳಷ್ಟೇ ಅಲ್ಲ; ವೀರಭದ್ರಪ್ಪ ಅವರ ಅಸಾಧಾರಣ ವಿದ್ವತ್ತೆಗೆ ಸಲ್ಲಿಸಿದ ನುಡಿಗೌರವವೂ ಆಗಿದೆ. ◆



**ಐದು ಕಥಾ ಸಂಕಲನ, ಆರು ಕಾದಂಬರಿ,ವಿಚಾರ ಸಾಹಿತ್ಯ, ಸಾಹಿತ್ಯ ವಿಮರ್ಶೆ, ವ್ಯಕ್ತಿ ಚಿತ್ರ ಸೇರಿದಂತೆ ಇಪ್ಪತ್ತಕ್ಕೂ ಹೆಚ್ಚು ಕೃತಿಗಳನ್ನು ಈಗಾಗಲೇ ಪ್ರಕಟಿಸಿರುವ ಲಕ್ಷ್ಮಣ ಕೊಡಸೆ ಅವರು ಪ್ರಜಾವಾಣಿ ದಿನಪತ್ರಿಕೆಯ ಸಂಪಾದಕೀಯ ಬಳಗದಲ್ಲಿ ಉನ್ನತ ಸ್ಥಾನಗಳನ್ನು ನಿರ್ವಹಿಸಿ ನಿವೃತ್ತರಾಗಿದ್ದಾರೆ. ತುಂಬ ಸಂಕೋಚದ ಸ್ವಭಾವದ ಕೊಡಸೆ ಅವರನ್ನು ಕರ್ನಾಟಕ ಸಂಘದಲ್ಲಿ ಮಾತನಾಡಿಸುವ ನಮ್ಮ ಆಸೆಯಿನ್ನೂ ಕೈಗೂಡಿಲ್ಲ. ಕನ್ನಡ ಉಪನ್ಯಾಸಕರನ್ನೂ ನಾಚಿಸುವಂತೆ ಪ್ರಾಚೀನ ಸಾಹಿತ್ಯವನ್ನು ಅಧ್ಯಯನ ಮಾಡಿರುವ ಕೊಡಸೆ ಅವರ ಆಸಕ್ತಿಗೆ ಸಾಕ್ಷಿಯಾಗಿ ಈ ಪುಸ್ತಕ ವಿಮರ್ಶೆಯಿದೆ.**

# ಪ್ರಭುತ್ವವೆಂಬ ಸ್ಥಾವರವೂ, ಕಲೆಯೆಂಬ ಜಂಗಮವೂ...

• ಡಾ. ಬಂಜಗೆರೆ ಜಯಪ್ರಕಾಶ



ಕಲೆ ಮತ್ತು ಪ್ರಭುತ್ವಕ್ಕೆ ಒಂದು ಹುಟ್ಟಾ ವಿರೋಧವಿದೆ. ಗೂಗಿ ವಾ ಥಿಯಾಂಗೋ ತನ್ನ 'ಪೆನ್ ಪಾಯಿಂಟ್ಸ್, ಗನ್ ಪಾಯಿಂಟ್ಸ್ ಅಂಡ್ ಡ್ರೀಮ್ಸ್' ಕೃತಿಯಲ್ಲಿ ಇದನ್ನು ಎರಡು ಅಂಶಗಳ ಮೂಲಕ ವಿವರಿಸುತ್ತಾನೆ.

ಪ್ರಭುತ್ವವೆಂಬುದು ಯಾವುದೇ ಇರಲಿ ತನ್ನ ಸ್ವಭಾವದಿಂದಲೇ ಅದು ಯಥಾ ಸ್ಥಿತಿವಾದಿ. ಸಮಾಜದೊಳಗೆ ಪರಸ್ಪರ ಸಂಘರ್ಷದಲ್ಲಿರುವ ಹಿತಾಸಕ್ತಿಗಳ ನಡುವೆ ಅದು ಒಂದು ಸ್ಥಿರತೆಯನ್ನು ಉಂಟು ಮಾಡಲು ಪ್ರಯತ್ನಿಸುತ್ತದೆ. ಕಡೆಗೆ ಕ್ರಾಂತಿಕಾರಿ ಪರಿಸ್ಥಿತಿಯಲ್ಲಿ ಏರ್ಪಡುವ ಪ್ರಭುತ್ವವೂ ಕೂಡ ಹಳೆಯ ಆಳ್ವಿಕೆ ಹಾಗೂ ಸಾಂಸ್ಥಿಕ ರಚನೆಗಳೊಂದಿಗೆ ಇರುವ ವೈರುಧ್ಯಗಳನ್ನು ಬಗೆಹರಿಸಿಕೊಂಡ ತಕ್ಷಣ ತನ್ನ ಹೊಸ ಸಾಂಸ್ಥೀಕರಣಗಳನ್ನು ಸದೃಢಗೊಳಿಸಲು ತೊಡಗುತ್ತದೆ.

ಗೂಗಿಯ ಪ್ರಕಾರ ಯಾವುದೇ ಪ್ರಭುತ್ವ ನಿರಂತರವಾಗಿ ಕ್ರಾಂತಿಯಲ್ಲಿರಲು ಸಾಧ್ಯವಿಲ್ಲ. ಕಲೆ ಎಂಬುದು ಅದರ ಸ್ವಭಾವದಿಂದಲೇ ಕ್ರಾಂತಿಕಾರಿ. ತನ್ನನ್ನು ಅದು ಸದಾ ನವೀಕರಿಸಿ ಕೊಳ್ಳಬಯಸುತ್ತದೆ. ಕಲಾವಿದನೊಬ್ಬ ತನ್ನ ಕೃತಿಗಳಲ್ಲಿಯೂ ಭಿನ್ನ ಬಗೆಯ ಅಭಿವ್ಯಕ್ತಿಯನ್ನು ಕಂಡುಕೊಳ್ಳುವ ಪ್ರಯತ್ನ ನಿರಂತರವಾ ಗಿರಿಸಿರುತ್ತಾನೆ.

ವಸ್ತುವಿಗೆ ಸಂಬಂಧಪಟ್ಟಂತೆ ಕಲೆ ಕೇವಲ 'ಅದು ಹೇಗಿದೆಯೋ ಹಾಗೆ' ಮಾತ್ರ ಗ್ರಹಿಸಲು ಪ್ರಯತ್ನಿಸುವುದಿಲ್ಲ. ಬದಲಾಗಿ ಅದು ಹೇಗೆಲ್ಲ ಇರಬಲ್ಲದು ಎಂಬುದನ್ನು ಗ್ರಹಿಸಲು ಬಹಳ ಮುಖ್ಯವಾಗಿ ಪ್ರಯತ್ನಿಸುತ್ತದೆ. ಹಾಗಾಗಿಯೇ ಅರಿಸ್ಟಾಟಲ್ ತನ್ನ 'ಪೊಯಟಿಕ್ಸ್' ಕೃತಿಯಲ್ಲಿ ಕಾವ್ಯವೆಂಬುದು ಚರಿತ್ರೆಗಿಂತ ಹೆಚ್ಚು ಸಾರ್ವತ್ರಿಕ ವಾದುದಾಗಿದ್ದು, ಚರಿತ್ರೆಯು ವಿದ್ಯಮಾನಗಳನ್ನು ಹೇಗಿವೆಯೋ ಹಾಗೆ ಪರಿಶೀಲಿಸುತ್ತದೆಯಾದರೆ ಕಲೆಯು ವಿದ್ಯಮಾನಗಳನ್ನು ಹೇಗಿರಬಲ್ಲವು ಎಂಬ ನೆಲೆಯಲ್ಲಿ ಪರಿಶೀಲಿಸುತ್ತದೆ ಎನ್ನುತ್ತಾನೆ. ಬೇರೆ ಮಾತುಗಳಲ್ಲಿ ಹೇಳಬೇಕೆಂದರೆ ಕಲೆ ವಸ್ತುಸ್ಥಿತಿಯನ್ನು ಸಾಧ್ಯತೆಗಳ ನೆಲೆಯಲ್ಲಿ ಪರಿಶೀಲಿಸುತ್ತದೆ.

ಕಲೆ ಎಂಬುದು ತನ್ನ ಪರಿಪೂರ್ಣತೆಗಾಗಿ, ವಸ್ತು ಮತ್ತು ವಿನ್ಯಾಸದ ಆದರ್ಶವಾದಿ ಸಮ್ಯಕ್ಯತೆಗಾಗಿ ಪ್ರಯತ್ನಿಸುತ್ತದೆ. ಆದರೆ ವಸ್ತುವನ್ನು ಕುರಿತಂತೆ ಅದು ಯಾವಾಗಲೂ ಸ್ಥಗಿತವಲ್ಲ. ಅದು ನಿರಂತರವಾಗಿ ಬದಲಾಗುತ್ತಿರುತ್ತದೆ. ನಿರಂತರ ಬದಲಾಗುವ ವಸ್ತುಸ್ಥಿತಿಯ ಸಾರಾಂಶವನ್ನು ಪರಿಗ್ರಹಿಸಲು ಕಲೆಯು ಯತ್ನಿಸುತ್ತದೆ. ಚಲನೆಯನ್ನು ಸಂಭ್ರಮಿಸುತ್ತದೆ.

ಕಲೆ ಎಂಬುದು ಚಲನೆಯೊಳಗಿನ ಸ್ಥಗಿತತೆ ಹಾಗೂ ಸ್ಥಗಿತತೆಯೊಳಗಿನ ಚಲನೆ. ಆದರೆ ಪ್ರಭುತ್ವವೆಂಬುದು ವಸ್ತುಸ್ಥಿತಿಯ ಪರಿಪೂರ್ಣತೆಗಾಗಿ ಪ್ರಯತ್ನಿಸುತ್ತದೆ. ಉದಾಹರಣೆಗೆ ನ್ಯಾಯಾಂಗ ವ್ಯವಸ್ಥೆ. ಬದಲಾಗುತ್ತಿರುವ ವಸ್ತುಸ್ಥಿತಿಯೊಂದಿಗೆ ಅದು ಸಂಘರ್ಷದಲ್ಲಿದ್ದರೂ ಕೂಡ ಅದನ್ನು ನೆಲೆಗೊಳಿಸುವ ದಿಸೆಯಲ್ಲಿ ಪ್ರಭುತ್ವದ ಪ್ರಯತ್ನ ಸಾಗುತ್ತದೆ. ಅದು ಚಲನೆಯನ್ನು ಬಂಧಿಸಿಡಲು ಪ್ರಯತ್ನಿಸುತ್ತದೆ. ವಸ್ತುಸ್ಥಿತಿಯ ಪುನರಾವರ್ತನೆಯನ್ನು ಬಯಸುತ್ತದೆ. ಚಲನೆರಹಿತವಾದ ಸ್ಥಗಿತತೆ ಎಂಬುದು ಪ್ರಭುತ್ವದ ಕಲೆಯ ತಿರುಳು.

ಆದರೆ ಕಲೆ, ಆಲೋಚನೆ, ಪ್ರಕೃತಿ, ಜೀವನ ಮುಂತಾದವುಗಳಿಗೆ ಚಲನೆಯ ಪರಿಕಲ್ಪನೆಯೇ ಕೇಂದ್ರಬಿಂದು. ಹಾಗಾಗಿ ಬದುಕಿನ ಎಲ್ಲಾ ರಂಗಗಳ ಅಂತಿಮ ಪರಿಪೂರ್ಣತೆಯನ್ನು ಪ್ರತಿಪಾದಿಸುವ ಪ್ರಭುತ್ವದೊಂದಿಗೆ ಅದು ಸಂಘರ್ಷದಲ್ಲಿದೆ.

'ಜನ ಇದಕ್ಕಿಂತ ಹೆಚ್ಚಿನದೇನನ್ನು ನಿರೀಕ್ಷಿಸುತ್ತಾರೆ?' ಎಂಬುದು ಬಹಳ ಸಲ ಪ್ರಭುತ್ವದ ನಾಯಕರಿಂದ ನಾವು ಕೇಳಿಸಿಕೊಳ್ಳುವ ಮಾತು. ಈ ಬಗೆಯಲ್ಲಿ ಒಂದು 'ಅಂತಿಮ' ನೆಲೆಯನ್ನು ತಲುಪಿರುವ ಮನೋಸ್ಥಿತಿಯೇ ಬಹಳ ಅಪಾಯ ಕಾರಿಯಾದದ್ದು. ಯಾಕೆಂದರೆ ಅದು ತನ್ನೊಳಗೆ ಒಂದು ನಿರಂಕುಶಾಧಿಕಾರದ ಹಾಗೂ ಅಸಹಿಷ್ಣುತೆಯ ಮನೋಭಾವದ ಭ್ರೂಣವನ್ನು ಒಳಗೊಂಡಿದೆ.

ಈ ಮನೋಭಾವ ಪ್ಲೇಟೋನ ಆದರ್ಶ ಗಣರಾಜ್ಯದಲ್ಲಿ ಪ್ರತಿಬಿಂಬಿಸಲ್ಪಟ್ಟಿದೆ. ಆತನ ಪ್ರಕಾರ ಕಲಾವಿದರ ಅನಿಯಂತ್ರಿತ ಹುಚ್ಚು ಮನೋಕಲ್ಪನೆಗಳಿಂದ ಅಪಾಯಕ್ಕೊಳಗಾಗುವ ಸ್ಥಿರತೆಯನ್ನು ಕಾಪಾಡುವುದಕ್ಕಾಗಿ ಗಣರಾಜ್ಯ ದಿಂದ ಅಂತಹವರನ್ನು ಹೊರಗಿಡಬೇಕು.

ಒಂದು ಪ್ರಭುತ್ವವೆಂಬುದು ಹೆಚ್ಚು ಸಾಂಪ್ರದಾಯಿಕ ಹಾಗೂ ನಿರಂಕುಶವಾದಂತೆಲ್ಲಾ ಅದು ಸಾಮಾಜಿಕ ನೈತಿಕತೆಯ ಬಗ್ಗೆ ಹುಟ್ಟುವ ಆಗ್ರಹಗಳ ಬಗ್ಗೆ ಸದಾ ಅಸಹಿಷ್ಣುವಾಗಿರುತ್ತದೆ. ಆದರೆ ಕಲೆ ಎಂಬುದು ಪ್ರಸ್ತುತ ಪರಿಸ್ಥಿತಿಯ ಎಲ್ಲಾ ಮಿತಿಗಳನ್ನೂ ನೆನಪಿಸುವುದಕ್ಕೆ ಹುಟ್ಟಿಕೊಂಡಂತಿರುತ್ತದೆ. ವಸಾಹತುಶಾಹಿ ಹಾಗೂ ನವವಸಾಹತುಶಾಹಿ ಪ್ರಭುತ್ವಗಳು ನಿರಂಕುಶಾಧಿಕಾರದ ಬೇರೆ ಬೇರೆ ಪ್ರತಿರೂಪಗಳಾಗಿದ್ದು, ಬದಲಾವಣೆಯನ್ನು ಪ್ರತಿಪಾದಿಸುವ ಯಾವುದೇ ಕಲೆ ಅದರೊಂದಿಗೆ ಅನಿವಾರ್ಯವಾಗಿ ಸಂಘರ್ಷಕ್ಕೆ ಬೀಳುತ್ತದೆ.

ಪರಿಪೂರ್ಣ ಕಲೆ ಎಂಬುದು ಪರಿಪೂರ್ಣ ಸಂಕ್ರಮಣದ ಪರವಾಗಿದ್ದರೆ, ಅಂದರೆ ಜೀವಪರವಾಗಿದ್ದರೆ ಪರಿಪೂರ್ಣ ಪ್ರಭುತ್ವವೆಂಬುದು ಪರಿಪೂರ್ಣ ಸ್ಥಗಿತತೆಯ ಅಂದರೆ, ಮರಣದ ಪರವಾಗಿರುತ್ತದೆ.

ಕಲೆಗೆ ಇರುವ ಎರಡನೇ ಸ್ವಭಾವವನ್ನು 'ಸಾಕ್ರಟಿಕ್ ಸ್ವಭಾವ' ಎಂದು ಕರೆಯುತ್ತಾನೆ ಗೂಗಿ. ನೀವು ಆ ಕತೆಯನ್ನು ತಿಳಿದಿರಬಹುದು. ಒಮ್ಮೆ ಅವನ ಬಾಲ್ಯ ಸ್ನೇಹಿತನೊಬ್ಬ ಅಶರೀರವಾಣಿಯ ಮುಖಾಂತರ ತಿಳಿದು



ಹೊರಗೆಲ್ಲ ಹಸಿರು, ಒಳಗೆಲ್ಲ ಕೆಸರು ಇದು ಎಂಥ ವರ್ಣಲೀಲೆ।
ಹೊರಗೆಲ್ಲ ಸೊಗಸು, ಒಳಗಡೆಯೂ ಹೊಲಸು ನವಚೈತ್ರ ಮಾಸದಲ್ಲೆ॥
-ಎಚ್.ಎಸ್.ಶಿವಪ್ರಕಾಶ್





ಕೊಂಡನಂತೆ– ಸಾಕ್ರಟೀಸನಗಿಂತ ಬುದ್ಧಿವಂತರಾದವರು ಬೇರೊಬ್ಬರಿಲ್ಲ ಎಂದು. ಇದನ್ನು ಕೇಳಿಸಿಕೊಂಡ ಸಾಕ್ರಟೀಸ್ ಅದನ್ನು ನಂಬಿಕೊಳ್ಳದೆ ಅತ್ಯಂತ ಬುದ್ಧಿವಂತರು ಎನಿಸಿಕೊಂಡವರನ್ನು ಪ್ರಶ್ನಿಸುವುದರಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಾನೆ. ಇದರ ಮುಖಾಂತರ ಆತ ಕಂಡುಕೊಳ್ಳುವುದೇನೆಂದರೆ, ತಾನು ತನಗಿರುವ ಅಜ್ಞಾನದ ಬಗ್ಗೆ ಪ್ರಜ್ಞಾವಂತನಾಗಿದ್ದೇನೆ. ಬುದ್ಧಿವಂತರೆನಿಸಿಕೊಂಡ ಬಹಳಷ್ಟು ಜನ ತಮ್ಮ ಅಜ್ಞಾನದ ಬಗ್ಗೆ ಪ್ರಜ್ಞಾವಂತರಾಗಿಲ್ಲ. ಆದ್ದರಿಂದ ತನ್ನ ಅಜ್ಞಾನವನ್ನು ಗುರುತಿಸಿಕೊಂಡಿರುವ ಸಾಕ್ರಟೀಸ್ ಹೆಚ್ಚೆಚ್ಚು ತಿಳಿದುಕೊಳ್ಳಲು ಪ್ರಯತ್ನಿಸುತ್ತಿರುವುದರಿಂದ ಅವನು ಬೇರೆ ಬುದ್ಧಿವಂತರಿಗಿಂತ ಜಾಣನಾಗಿದ್ದಾನೆ.

ನಿಜವಾಗಲೂ ಬುದ್ಧಿವಂತರು ಯಾರೆಂದರೆ ನಿಜವಾದ ಜ್ಞಾನದ ಎದುರು ತಾವು ತೃಣ ಮಾತ್ರರೆಂದು ಅರಿತುಕೊಂಡವರು. ಸಮಸ್ಯೆ ಏನೆಂದರೆ, ಈ ಬಗೆಯ ಪ್ರಶ್ನೆಗಳಿಂದ ಸಾಕ್ರಟೀಸ್ ಬಹಳಷ್ಟು ವಿರೋಧವನ್ನು ಕಟ್ಟಿಕೊಂಡ. ಆತನ ಮೇಲೆ ಏರ್ಪಟ್ಟ ಆರೋಪವೇನೆಂದರೆ, "ಅವನು ಈ ಭೂಮಿ ಮೇಲಿರುವ ಎಲ್ಲ ವಿಷಯಗಳ ಬಗ್ಗೆ ತನಿಖೆ ಮಾಡುತ್ತಾನೆ ಹಾಗೂ ದುರ್ಬಲ ವಾದಗಳನ್ನು ಮಂಡಿಸಿ ಬಲಿಷ್ಠರನ್ನು ಸೋಲಿಸುತ್ತಾನೆ".

ಅಥೆನ್ಸ್‌ನ ಪ್ರಭುತ್ವದೆದುರು ಅವನ ವಿರೋಧಿಗಳು ಮಂಡಿಸಿದ ಆಪಾದನೆಯ ಮತ್ತೊಂದು ಮುಖವೇನೆಂದರೆ 'ಸಾಕ್ರಟೀಸ್ ಯುವ ಮನಸ್ಸುಗಳನ್ನು ಭ್ರಷ್ಟಗೊಳಿಸುತ್ತಿದ್ದಾನೆ ಹಾಗೂ ಪ್ರಭುತ್ವ ಗುರುತಿಸಿರುವ ದೇವತೆಗಳ ಬದಲು ತಾನೇ ಸೃಷ್ಟಿಸಿರುವ ದೇವರುಗಳಲ್ಲಿ ನಂಬಿಕೆ ಹುಟ್ಟಿಸಲು ಪ್ರಯತ್ನಿಸುತ್ತಿದ್ದಾನೆ. ಮತ್ತು ಪ್ರಶ್ನೆಗಳನ್ನು ಕೇಳುವಾಗ ತನ್ನ ಪ್ರಜ್ಞೆಯ ಆದೇಶಗಳನ್ನು ಮಾತ್ರ ಅನುಸರಿಸುತ್ತಾನೆ'.

ಸಾಕ್ರಟೀಸ್ ತನ್ನ ಪ್ರತಿವಾದದಲ್ಲಿ ಹೀಗೆ ಹೇಳಿದ: 'ಈ ಸಮಾಜವೆಂಬುದು ಬೃಹತ್ತಾಗಿ ಬೊಜ್ಜು ಬೆಳೆಸಿಕೊಂಡಿರುವ ಕುದುರೆಯಂತಾಗಿದೆ. ತನ್ನ ಬೊಜ್ಜಿನಿಂದಾಗಿ ಅದು ಸೋಮಾರಿಯಾಗಿದ್ದು ಕಡಜವೊಂದು ಕಚ್ಚಿದಾಗ ಮಾತ್ರ ಕದಲುವುದಕ್ಕೆ ಪ್ರಯತ್ನಿಸುತ್ತದೆ. ದೇವರು ನನಗೆ ಆ ಕಡಜದ ಕೆಲಸ ವಹಿಸಿದ್ದಾನೆಂದು ಕಾಣುತ್ತದೆ. ಆದ್ದರಿಂದ ನಿಮ್ಮಲ್ಲಿ ಎಲ್ಲರನ್ನೂ ಎಚ್ಚರಿಸುವವರೆಗೆ, ಪ್ರೇರೇಪಿಸುವವರೆಗೆ ನಾನು ಸುಮ್ಮನಾಗುವುದಿಲ್ಲ.'

ಸಾಕ್ರಟೀಸ್ ತನ್ನ ಪ್ರವೃತ್ತಿಯನುಸಾರ ಪ್ರಶ್ನೆಗಳನ್ನು ಕೇಳುವವನಾಗಿದ್ದ. ಅದಕ್ಕಾಗಿ ಪ್ರಭುತ್ವ ಅವನಿಗೆ ವಿಷ ಕುಡಿಯಲು ಆದೇಶಿಸಿತು. ತನ್ನ ಪ್ರಶ್ನೆ ಕೇಳುವ ಹಕ್ಕಿಗಾಗಿ ಸಾಕ್ರಟೀಸ್ ಹೆಮ್ಲಾಕ್ ವಿಷವನ್ನು ಕುಡಿದ.

ಸಾಕ್ರಟೀಸ್ ಉತ್ತರಗಳ ಮೇಲೆ ತನಗಿದ್ದ ಸ್ವಾಮ್ಯಕ್ಕಾಗಿ ವಿಷ ಕುಡಿಯಲಿಲ್ಲ. ಬದಲಾಗಿ ತನ್ನ ಪ್ರಶ್ನೆ ಕೇಳುವ ಹಕ್ಕಿಗಾಗಿ ವಿಷ ಕುಡಿದ. ಸಾಕ್ರಟೀಸ್ ಒಂದು ವಿಧದಲ್ಲಿ ನಮ್ಮ ಸಮಾಜದ ಕಲಾವಿದರ ಸ್ಥಾನಕ್ಕೆ ಪ್ರತೀಕವಾಗಿದ್ದಾನೆ.

ಕಲೆ ಎಂಬುದು ಪ್ರಶ್ನೆಗಳಿಗೆ ಉತ್ತರ ಕೊಡುವುದಕ್ಕಿಂತ ಹೆಚ್ಚಾಗಿ ಪ್ರಶ್ನೆಗಳನ್ನು ಹುಟ್ಟಿಸುತ್ತದೆ. ಕಲೆ ತನಗೆ ಗೊತ್ತಿಲ್ಲದಿರುವ ಬಿಂದುವಿನಿಂದ ಗೊತ್ತಾಗಬೇಕಿರುವ ನೆಲೆಯ ಕಡೆಗೆ ತನ್ನನ್ನು ನಿರ್ದೇಶಿಸಿಕೊಳ್ಳುತ್ತದೆ. ಆದ್ದರಿಂದ ಅದಕ್ಕೆ ಒಂದು ಪರಿಶೀಲನಾತ್ಮಕ ಸ್ವಭಾವವಿದೆ. ಸರಿಯಾಗಿ ಹೇಳಬೇಕೆಂದರೆ ಕಲೆ ಉತ್ತರಗಳನ್ನು ಹೊಂದಿರುವುದು ಕಡಿಮೆ. ಅದರ ಪ್ರಶ್ನೆಗಳೊಳಗೆ ಕೆಲವು ಸಲ ಉತ್ತರಗಳೆಂಬವು ಅಡಗಿಸಲ್ಪಟ್ಟಿರಬಹುದು. ಹಾಗೆಯೇ ಕೆಲವು ಸುಳಿವುಗಳಿರಬಹುದು. ಹಾಗೆಯೇ ಸಾಧ್ಯತೆಗಳ ಹೊಳಹುಗಳಿರಬಹುದು. ಆದರೆ ಖಂಡಿತವಾಗಿ ನಿಶ್ಚಿತಾರ್ಥಗಳಿಲ್ಲ.

ಆದ್ದರಿಂದ ಸಾಹಿತ್ಯದ ಪ್ರಶ್ನೆಗಳೆಂಬವು ಬಹಳ ಸಲ ನಮ್ಮ ದೈನಿಕದ ಮಾತುಗಳಂತೆ. ನೀವು ಹೇಗಿದ್ದೀರಿ? ಏನು ಮಾಡುತ್ತಿದ್ದೀರಿ? ಎಲ್ಲಿಗೆ ಹೋಗುತ್ತಿದ್ದೀರಿ? ಮುಂತಾಗಿ. ಮುಖ್ಯವಾಗಿ ಈ ಪ್ರಶ್ನೆಗಳಿಗೆ ಉತ್ತರ ಪ್ರಶ್ನೆ ಕೇಳಿಸಿಕೊಳ್ಳುವವನಲ್ಲಿದೆ. ಇದಕ್ಕೆ ತದ್ವಿರುದ್ಧವಾಗಿ ಪ್ರಭುತ್ವದ ಬಳಿ ಹೇರಳವಾದ ಉತ್ತರಗಳಿವೆ. ಆದರೆ ಪ್ರಶ್ನೆಗಳು ಬಹಳ ಕಡಿಮೆ. ಪ್ರಭುತ್ವ ಹೆಚ್ಚು ನಿರಂಕುಶವಾದಂತೆಲ್ಲಾ ತನ್ನನ್ನು ತಾನು ಪ್ರಶ್ನಿಸಿಕೊಳ್ಳುವುದನ್ನು, ಹಾಗೆಯೇ ಇತರರು ಪ್ರಶ್ನಿಸುವುದನ್ನು ನಿಲ್ಲಿಸಬಯಸುತ್ತದೆ.

ಅಥೆನ್ಸ್‌ನ ತಥಾಕಥಿತ ಬುದ್ಧಿವಂತರಂತೆ, ತನ್ನ ಬುದ್ಧಿವಂತಿಕೆಯ ಬಗ್ಗೆ ಅದು ಬಹಳ ಖಾತ್ರಿ ಹೊಂದಿದ್ದು ಸಾಕ್ರಟೀಸ್‌ನಿಂದ ಏನನ್ನೂ ಕಲಿಯಲು ಸಿದ್ಧವಾಗಿರುವುದಿಲ್ಲ.

ತಾನು ಕಂಡುಕೊಂಡ ಸ್ಥಿತಿಯನ್ನು ಅಂತಿಮ ಸತ್ಯವೆಂಬಂತೆ ಪ್ರಭುತ್ವ ನಂಬುತ್ತದೆ. ಹಾಗೆಯೇ ಅದನ್ನು ಪರಿಪೂರ್ಣ ಜ್ಞಾನವನ್ನಾಗಿ ಪರಿಗಣಿಸುತ್ತದೆ. ಜೊತೆಗೆ ಪ್ರಶ್ನೆ ಕೇಳುವವರನ್ನು ದಂಗೆಕೋರರಂತೆ, ವಿದ್ರೋಹಿಗಳಂತೆ ಅಥವಾ ಹುಚ್ಚರಂತೆ ಪರಿಗಣಿಸುತ್ತದೆ.

ಗೂಗಿ 'ಗಿಕುಯು' ಭಾಷೆಯಲ್ಲಿ'ಮಾಟಿಗರಿ'ಎಂಬ ಕಾದಂಬರಿಯನ್ನು ೧೯೮೬ರಲ್ಲಿ ಬರೆದ. ಮಾಟಿಗರಿ ಎಂಬ ಪಾತ್ರ ವಿದ್ರೋಹಾತ್ಮಕ ಚಿಂತನೆಗಳನ್ನು ಜನರ ನಡುವೆ ಬಿತ್ತುತ್ತಿದೆ ಎಂದು ಯಾರೋ ಸರ್ಕಾರಕ್ಕೆ ದೂರು ನೀಡಿದರು. ಹಿಂದೆ ಮುಂದೆ ಆಲೋಚಿಸದೆ ಆ ಸರ್ವಾಧಿಕಾರಿ ಪ್ರಭುತ್ವ 'ಮಾಟಿಗರಿ'ಯನ್ನು ಬಂಧಿಸಲು ಆದೇಶ ಹೊರಡಿಸಿತು. ಅದು ಬಂಧಿಸಲು ಸಿಗುವ ವ್ಯಕ್ತಿಯಲ್ಲ ಬದಲಿಗೆ ಅದೊಂದು ಕಾದಂಬರಿಯ ಪಾತ್ರ ಎಂಬುದು ಅದಕ್ಕೆ ಆಮೇಲೆ ತಿಳಿದಿರಬಹುದು. ನಿರಂಕುಶ ಪ್ರಭುತ್ವಕ್ಕೆ ಆ ಕಾದಂಬರಿಯ ಮಾಟಿಗರಿ ಪಾತ್ರ ಸಾಕ್ರಟೀಸ್‌ನನ್ನು ಅವನ ಕಾಲದ ಪ್ರಭುತ್ವ ಪರಿಗಣಿಸಿದ ರೀತಿಯಲ್ಲೇ ಹಾಗೆ ಪರಿಗಣಿಸಿತು. ಹಾಗಾಗಿ ಆ 'ಮಾಟಿಗರಿ'ಯನ್ನು ಬಂಧಿಸುವ ಆಜ್ಞೆಯನ್ನು ನಿರಂಕುಶಾಧಿಕಾರ ಹೊರಡಿಸಿತ್ತು. ಯಾಕೆಂದರೆ ಅಂದಿಗೂ ಇಂದಿಗೂ ಪ್ರಶ್ನೆಗಳು, ಪ್ರಶ್ನಿಸುವವರನ್ನು ಕಂಡರೆ ಸರ್ಕಾರಗಳಿಗೆ ಸರಿ ಬೀಳುವುದಿಲ್ಲ.◆



**ಕವಿ, ಸಂಸ್ಕೃತಿ ಚಿಂತಕ ಹಾಗೂ ಜನಪರ ಹೋರಾಟಗಾರರಾಗಿ ಪ್ರಸಿದ್ಧರಾಗಿರುವ ಬಂಜಗೆರೆ ಕನ್ನಡ ವಿಶ್ವವಿದ್ಯಾಲಯದಿಂದ ಡಿ.ಲಿಟ್ ಪದವಿ ಪಡೆದಿದ್ದಾರೆ. ಪದಾರ್ಪಣ, ಮಹೂವಾ, ನಾಳೆಗಾದರೂ ಸಿಗದೆ ನಿನ್ನ ತಾವಿನ ಗುರುತು ಎಂಬ ಕವನ ಸಂಕಲನಗಳನ್ನೂ, ಪ್ರವಾದಿ, ತಲೆಮಾರು, ಸಮುದ್ರ ಮತ್ತು ಇತರ ಕವಿತೆಗಳು, ಮತ್ತೊಂದು ಪ್ರಸ್ಥಾನ, ಲಾಲ್ ಬನೋ ಗುಲಾಮಿ ಛೋಡೋ ಬೋಲೋ ಒಂದೇ ಮಾತರಂ, ವಸಂತ ಮೇಘ ಘರ್ಜನೆ, ಜಾತಿ-ರಾಷ್ಟ್ರದೊಳಗೊಂದು ರಾಷ್ಟ್ರ' ಎಂಬ ಹೆಸರಿನ ಕೃತಿಗಳನ್ನು ಇಂಗ್ಲಿಷ್, ತೆಲುಗು ಮತ್ತು ಇತರ ಭಾಷೆಗಳಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ. ಅದ್ಭುತ ಭಾಷಣಕಾರರೂ ಆಗಿರುವ ಜಯಪ್ರಕಾಶ್ ಅವರು ಪ್ರಸ್ತುತ ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷತೆಯ ಜವಾಬ್ದಾರಿ ಹೊತ್ತು ಕನ್ನಡ ಸಾಹಿತ್ಯವನ್ನು ಓದುಗರಿಗೆ ತಲುಪಿಸುವ ವಿನೂತನ ಯೋಜನೆಗಳನ್ನು ಪ್ರಕಟಿಸಿ ಭರವಸೆ ಮೂಡಿಸಿದ್ದಾರೆ.**





# ಚಿತ್ತಾಲ, ಬಲ್ಲಾಳರನ್ನು ಸನ್ಮಾನಿಸಿದ ಆ ಸಂಜೆಯ ನೆನಪುಗಳು

• ಕೆ.ಜಿ. ಸುಬ್ರಹ್ಮಣ್ಯ

೧೯೯೦ನೇ ಇಸವಿ ಇರಬೇಕು, ಆಗ ಮುಂಬೈಯಿಂದ ಬೆಂಗಳೂರಿನಲ್ಲಿ ನೆಲೆಸುವ ಉದ್ದೇಶದಿಂದ ಮುಂಬೈ ಬಿಟ್ಟು ಬಂದಿದ್ದ ವ್ಯಾಸರಾಯ ಬಲ್ಲಾಳರಿಗೆ ೭೦ ವರ್ಷ ತುಂಬುತ್ತದೆಂದೂ ಮತ್ತು ತೀರ ಇತ್ತೀಚಿಗೆ ನಿಧನರಾದ ಯಶವಂತ ಚಿತ್ತಾಲರಿಗೆ ಅರವತ್ತು ವರ್ಷಗಳಾಗುತ್ತದೆಂದೂ ಗೊತ್ತಾದ್ದರಿಂದ ಇಬ್ಬರನ್ನು ಒಟ್ಟಿಗೆ ಬರ ಮಾಡಿಕೊಂಡು ಒಂದು ಸನ್ಮಾನ ಸಮಾರಂಭ ಮಾಡಬೇಕೆಂದು ನಿರ್ಣಯಿಸಲಾಯಿತು. ಅದೇ ವೇಳೆಗೆ ಅವರಿಬ್ಬರದೂ ಒಂದೊಂದು ಕಾದಂಬರಿ ಪ್ರಕಟವಾಗಿದ್ದವು. ಬಲ್ಲಾಳರ ಆಕಾಶಕ್ಕೊಂದು ಕಂದೀಲು ಮತ್ತು ಚಿತ್ತಾಲರ (ಪುರುಶೋತ್ತಮ....?) ಪ್ರಕಟವಾಗಿದ್ದವು. ಹೀಗಾಗಿ ಅವುಗಳ ವಿಮರ್ಶಾತ್ಮಕ ಮಾತುಗಳೂ ಅಭಿನಂದನಾ ಭಾಷಣದಲ್ಲಿ ಅವರನ್ನು ಬರಲೆಂದು ಶ್ರೀ ರಾಜೇಂದ್ರ ಚೆನ್ನಿ (ಆಕಾಶಕ್ಕೊಂದು ಕಂದೀಲು) ಮತ್ತು ಶ್ರೀ ಹೆಚ್.ಎಸ್. ರಾಘವೇಂದ್ರರಾವ್ (ಚಿತ್ತಾಲರ ಬಗ್ಗೆ) ಅವರನ್ನು ಅಭಿನಂದನಾ ನುಡಿಗಳನ್ನಾಡಲು ಆಹ್ವಾನಿಸಲಾಯಿತು. ಸಮಾರಂಭ ತುಂಬ ಅಚ್ಚುಕಟ್ಟಾಗಿ ನಡೆಯಿತು. ಇಬ್ಬರೂ ಮುಂಬೈಯಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ಬರಹಗಾರರಾಗಿ ಮಾತ್ರವಲ್ಲ, ಸಂಘಟಕರಾಗಿಯೂ ಒಟ್ಟಾಗಿ ಕೆಲಸ ಮಾಡಿದವರಾದ್ದರಿಂದ, ಈಗ ಮತ್ತೇ ಭೇಟಿಯಾಗುವ ಸದವಕಾಶ ಕರ್ನಾಟಕ ಸಂಘದಿಂದ ಒದಗಿದ ಬಗ್ಗೆ ತುಂಬ ಸಂತೋಷ ಪಟ್ಟಿದ್ದರು.

ಅವರಿಬ್ಬರ ಸಾಹಿತ್ಯ ಕೃತಿಗಳ ಬಗ್ಗೆ ನಾನೇನೂ ಬರೆಯಲು ಹೊರಟಿಲ್ಲ. ಆ ಎಲ್ಲ ಕೃತಿಗಳೂ, ಕಥಾ ಸಂಗ್ರಹಗಳು ಮತ್ತು ಕಾದಂಬರಿಗಳು ತುಂಬ ಪ್ರಸಿದ್ಧವಾದವು. ಈಗಲೂ ಪುನಃ ಓದಿದರೆ ಸಂತೋಷ ಕೊಡುವಂಥವು. ಆದರೆ, ಅವರ ಹಿನ್ನೆಲೆಗಳ ವಿಚಾರಕ್ಕೆ ಹೋದರೆ, ತೀರಾ ವಿಭಿನ್ನವಾದ ಪರಿಸರದಿಂದ ಬಂದವರು. ಬಲ್ಲಾಳರು ದಕ್ಷಿಣ ಕನ್ನಡದ ಒಂದು ಹಳ್ಳಿಯಿಂದ, ತುಂಬ ಬಡತನದಲ್ಲಿ ಬೆಳೆದು ಹೈಸ್ಕೂಲು ಶಿಕ್ಷಣ ಮುಗಿಸಿ ಹೊಟ್ಟೆಪಾಡಿಗಾಗಿ ಮುಂಬೈಗೆ ಹೋಗಿ ಸ್ಟೆನೋ ಗ್ರಾಫರ್ ಆಗಿ ಕೆಲಸಕ್ಕೆ ಸೇರಿದ್ದರೂ, ನಿವೃತ್ತರಾಗುವ ವೇಳೆಗೆ ಉನ್ನತ ಅಧಿಕಾರವರ್ಗಕ್ಕೆ ಸೇರಿದವರಾಗಿದ್ದರು. ಚಿತ್ತಾಲರು ಉತ್ತರ ಕನ್ನಡದ ಹನೇಹಳ್ಳಿಯಿಂದ ಬಂದವರು; ಸಾಕಷ್ಟು ಸ್ಥಿತಿವಂತ ಕುಟುಂಬದವರು. ಅವರ ದೊಡ್ಡಣ್ಣ ದಾಮೋದರ ಚಿತ್ತಾಲಯ ಕಾರವಾರದಲ್ಲಿ ತೆರಿಗೆ ಸಲಹೆಗಾರರಾಗಿ ಹೆಸರು ಮಾಡಿದ್ದಲ್ಲದೇ ಸಾಹಿತ್ಯಿಕ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮುಂದಾಳಾಗಿದ್ದು, ೧೯೭೪ರಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಸಂಘಟನಾ ಸಮಿತಿಯ ಅಧ್ಯಕ್ಷರಾಗಿದ್ದರು. ನಂತರದ ಅಣ್ಣ ನಡು ವಯಸ್ಸಿನಲ್ಲಿಯೇ ಮೃತರಾದ ಪ್ರಸಿದ್ಧ ಕವಿಯಾಗಿದ್ದ ಗಂಗಾಧರ ಚಿತ್ತಾಲರು. ಯಶವಂತ ಚಿತ್ತಾಲರೂ ಉನ್ನತ ವಿದ್ಯಾಭ್ಯಾಸ ಪಡೆದು, ಮುಂಬೈಯಲ್ಲಿ ಒಂದು ಕೈಗಾರಿಕೆಯಲ್ಲೂ ಅಧಿಕಾರಿಯಾಗಿಯೇ ಸೇರಿ ಕಂಪನೆಯ ಉನ್ನತ ಸ್ಥಾನದವರೆಗೂ ಏರಿದವರು. ವಿಚಿತ್ರವೆಂದರೆ, ಅವರ ಮಾತೃಭಾಷೆ ಕೊಂಕಣಿಯಾಗಿತ್ತು. ಅವರ ಪತ್ನಿಯವರಿಗೆ ಇಬ್ಬರು ಮಕ್ಕಳು– (ಒಬ್ಬ ಶಿಶುತಜ್ಞ ವೈದ್ಯ, ಎರಡನೇಯವರು ಚಾರ್ಟೆಡ್ ಅಕೌಂಟೆಟ್ ಮತ್ತು ಸಾಕಷ್ಟು ಪ್ರಸಿದ್ಧ ಹಿಂದೂಸ್ಥಾನಿ ಹಾಡುಗಾರ) ಮತ್ತು ಸೊಸೆಯೊಂದಿಗೆ ಯಾರಿಗೂ ಕನ್ನಡ ಬರುವುದಿಲ್ಲ.



ಬಲ್ಲಾಳ ದಂಪತಿಗಳು ಮತ್ತು ಚಿತ್ತಾಲ ದಂಪತಿಗಳು ಇಲ್ಲಿಯ ಸನ್ಮಾನ ಸಮಾರಂಭದಿಂದ ತುಂಬ ಸಂತೋಷಪಟ್ಟರು. ಬಲ್ಲಾಳರೂ ಮೂರನೆಯ ದಿನ ರಾತ್ರಿ ಹೊರಡುವ ಮುನ್ನ ಅವರಿಗೆ ದೂರದ ನೆಂಟರಾದ ಎಸ್.ವಿ. ಸತ್ಯನಾರಾಯಣ ಭಟ್ಟರ ಮನೆಯಲ್ಲಿ ಉಪಾಹಾರ ಸ್ವೀಕರಿಸಿದ್ದರು. ಚಿತ್ತಾಲರು ಅವರಿಗೆ ಸಂಬಂಧಿಕರಾದ ಎಸ್.ಜಿ. ಚಂದ್ರಘಟಗಿಯವರ ಮನೆಗೆ ಹೋಗಿ ಬಂದಿದ್ದರು. ಅವರುಗಳಿಗೆ ಹೋಟೆಲಿನಲ್ಲಿ ವಸತಿ ವ್ಯವಸ್ಥೆ ಮಾಡಿದ್ದರೂ, ಶಿವಮೊಗ್ಗದಲ್ಲಿ ಮೂರು ದಿನವಿದ್ದ ಚಿತ್ತಾಲ ದಂಪತಿಗಳು ಊಟಕ್ಕೆ ನಮ್ಮ ಮನೆಗೇ ಕರೆದ ಮೇರೆಗೆ ಬಂದಿದ್ದರು. ಇವರೆಲ್ಲರೂ ತುಂಬ ಸಜ್ಜನರು ಮತ್ತು ಸರಳರೂ ಆಗಿದ್ದರೆನ್ನುವುದು ನನ್ನ ಭಾವನೆ.

ಚಿತ್ತಾಲರು ಕತೆ ಮತ್ತು ಕಾದಂಬರಿ ಕ್ಷೇತ್ರದಲ್ಲಿ ಒಳ್ಳೆಯ ಹೆಸರನ್ನೇ ಮಾಡಿದ್ದರು. ಮತ್ತು ತುಂಬ ಒಳ್ಳೆಯ ವಿಮರ್ಶೆಗಳೂ ಇವರ ಕೃತಿಗಳನ್ನು ಕುರಿತುಬಂದಿದ್ದವು. ಆದರೂ, ಬಲ್ಲಾಳರಿಗೂ ಮತ್ತು ಚಿತ್ತಾಲರಿಗೂ ಅವರಿಗೆ ಅವಶ್ಯವಾಗಿ ಬರಬೇಕಾಗಿದ್ದ ಮನ್ನಣೆಗಳು ಎಂದರೆ ಗೌರವ ಡಾಕ್ಟರೇಟ್, ಸಾಹಿತ್ಯ ಸಮ್ಮೇಳನಾಧ್ಯಕ್ಷತೆ ಇತ್ಯಾದಿಗಳು ದೊರೆಯದೇ ಹೋದವು. ಚಿತ್ತಾಲರ ಹೆಸರು ಜ್ಞಾನಪೀಠ ಪುರಸ್ಕಾರಕ್ಕೆ ಪ್ರಸ್ತಾಪಿಸಲ್ಪಟ್ಟಿತ್ತೆಂದು ಕೇಳಿದ ನೆನಪು. ◆



**ಬಂದ ಒಂದು ವರ್ಷ ಡಾಕ್ಟರಿಗೆ ಉಸಿರಿಗೇ ಬಿಡುವಿಲ್ಲ. ವಿಸಿಟು, ವಿಸಿಟು, ವಿಸಿಟು! ಪ್ರತಿಫಲವೆಂದರೆ, ಸರಕಾರಿ ಗ್ರಾಂಟು ಮದ್ದಿಗೆ ಸಾಲದು; ಮನೆಯಲ್ಲಿರಲಿಕ್ಕೆ ಪುರಸೊತ್ತೂ ಸಾಲದು; ಹೆಂಡತಿಗೆ ಗಂಡನ ಭೇಟಿಯಾಗುವುದು ಊಟದ ಕಾಳದಲ್ಲಿ ಮಾತ್ರ. ಇತ್ತ ಊಟಕ್ಕೆ ಹರಹರ. ಆದರೆ, ಆರು ಏಳು ಕೋರ್ಜಿ ಅಕ್ಕಿಯಿರುವ ಹಳ್ಳಿಯವರೂ ಸಹ ಕೌಪೀನಧಾರಿಗಳಾಗಿ ಬಂದು 'ಏನೂ ಗತಿಯಿಲ್ಲ, ಒಂದು ಹೆರಿಗೆ ಮಾಡಿಸಿಕೊಡಬೇಕು' ಎಂದು ಅತ್ತರೆ ಅವರೇನು ಮಾಡುವುದು?**

# ರೂರಲ್ ಅಸ್ಪತ್ರೆ ರಾಮರಾಯರು

• **ಶಿವರಾಮಕಾರಂತ**

'ರೂ. ರಾ. ರಾ. ರೋ?' ಎಂದು ನಸ್ರಾಣಿ ಸುಬ್ಬಭಟ್ಟನು ಪಾಟಾಳಿ ಪರಮಯ್ಯನೊಡನೆ ಮಾತನಾಡುವುದು ತಿಳಿಯಿತು. ಪರಮಯ್ಯನಿಗೆ ಇದೆಲ್ಲಾ ಅರ್ಥವಾದೀತೇ? 'ನೀನು ಹೇಳುವುದನ್ನು ಬಾಯಿ ಬಿಡಿಸಿ ಹೇಳಬಾರದೆ?' ಎಂದು ಕೇಳಿದ ಆತ.

'ರೂರಲ್ ಆಸ್ಪತ್ರೆ ರಾಮರಾಯರು ಎಂಬುದು ತಿಳಿಯದೆ?' ಎಂಬ ಉತ್ತರ ಬಂದಿತು. ಡಾಕ್ಟರ್ ರಾಮರಾಯರ ಹೆಸರಿನ ಮೊದಲಿನ ಅಕ್ಷರಗಳನ್ನೆಲ್ಲಾ ಜೋಡಿಸಿ 'ರೂರಾರಾ' ಎಂದು ಗೇಲಿ ಮಾಡುವುದು ನಮ್ಮೂರ ವಾಡಿಕೆಯಾಗಿತ್ತು. ನಸ್ರಾಣಿ ಸುಬ್ಬಭಟ್ಟರಿಗೆ ರಾಮರಾಯರ ಹೆಸರನ್ನು ಕೇಳಿದರೆ ಆಗದು; ಆದರೆ ಚನ್ನಮಯ್ಯರಿಗೆ ಅವರು ತೀರಬೇಕಾದವರು. ಅವರ ತೈನಾತಿ ಬಚ್ಚನಿಗೂ ಈ ಡಾಕ್ಟರರ ಹೆಸರಾಗದು. ನಾಗಯ್ಯಸೆಟ್ಟರು ಅಂತರಂಗದಲ್ಲಿ ಅಲ್ಲವಾದರೂ, ಬಹಿರಂಗದಲ್ಲಿ ಅವರ ವಿಷಯದಲ್ಲಿ ತುಂಬಾ ಚೆನ್ನಾಗಿದ್ದಾರೆ. ಆಸ್ಪತ್ರೆ ಡಾಕ್ಟರರು ಎಂಬುದರಿಂದ ಎದುರಿನ ಮಟ್ಟಿಗಾದರೂ ರಾಮರಾಯರಿಗೂ ಊರವರಿಗೂ ಒಳ್ಳೆಯ ದಿನ. ಆದ್ದರಿಂದಲೇ ಪರಮಯ್ಯ–ಈ ಸುಬ್ಬಭಟ್ಟನ ದ್ವೇಷ, ಲೇವಡಿಗಳನ್ನು ಕೇಳಿ, ಒಂದು ದಿವಸ 'ಹೌದೇ', ಸುಬ್ಬಣ್ಣ, ಅಂಥಾ ಚೆನ್ನದಂಥಾ ಡಾಕ್ಟರರಿಗೂ ನಿಮ್ಮ ತಮಾಷೆಯೇ! ಏನೊ ಇರಲಿ, ಡಾಕ್ಟರರು ಬಂದ ಮೇಲೆ, ಪ್ರಾಣ ಹೋಗುವ ಕಾಲದಲ್ಲಿ ಒಂದಿಷ್ಟು ಮದ್ದಾದರೂ ಸಿಗುತ್ತದೆ. ಇಲ್ಲವಾದರೆ ಕುಂದಾಪುರ ಆಸ್ಪತ್ರೆಗೇ ಹೋಗಬೇಕಿತ್ತು. ಇಲ್ಲವೇ ರೊಕ್ಕ ಸುರಿದು ಷಾಪಿನ ಕೆಂಪುನೀರು ಸರಬೇಕಿತ್ತು' ಎಂದ.

ಸುಬ್ಬಭಟ್ಟನಿಗೆ ರಾಮರಾಯರ ಶಿಫಾರಸನ್ನು ಕೇಳುವುದೆಂದರೆ ಕಿವಿಯಲ್ಲಿ ಕಾದಸೀಸ ಸುರಿದ ಹಾಗೆ. 'ಡಾಕ್ಟರರು ಅಂದರೆ ಧರ್ಮರಾಜನದ್ದೇ ಅವತಾರ. ಇಲ್ಲಿಗೆ ಊರು ಉದ್ಧಾರ ಮಾಡಲಿಕ್ಕೆ ಬಂದಿದ್ದಾರೆ. ಸರಕಾರದವರು ತಿಂಗಳ ತಿಂಗಳ ರೂಪಾಯಿ ದಂಡ ತೆತ್ತರೆ, ಇವನು ತನ್ನದೇ ಅಂಗಡಿಯೆಂದು ತಿಳಿದು ಮದ್ದನ್ನು ಕೊಡುತ್ತಾನೆ. ಬಡಬಗ್ಗರಿಗೆ ಪ್ರಾಣಹೋದರೆ ಇಷ್ಟು ಮದ್ದನ್ನು ಕೊಡಲಿಕ್ಕಿಲ್ಲ' ಎಂದ. ಪರಮಯ್ಯನಿಗೆ ಸಿಟ್ಟು ಬಂದಿತು. 'ಯಾಕೆ ಅನ್ಯಾಯ ಹೇಳುತ್ತೀ ಮಹಾರಾಯ? ನಾನೇನು ರಾಮರಾಯರಿಗೆ ಕೊಟ್ಟಿದ್ದೇನೆ? ಅಲ್ಲ. ನನ್ನಲ್ಲಿ ಕೂಡಲಿಕ್ಕೇನುಂಟು? ಮೊನ್ನೆ ನನ್ನ ಮಗಳು ಕಾಯಿಲೆ ಎಂದು ಮಲಗಿದಳು; ಬಚಾವಿಲ್ಲ ಎಂದು ಗ್ರಹಿಸಿದ್ದೆ. ಆ ಮದ್ದು, ಈ ಬೇರು ಎಂದು ಹಾಡಿಯನ್ನೆಲ್ಲಾ ಹರಡಿ; ನಿಸ್ಸಂತಾನ ಮಾಡಿದರೂ ಮಗುವಿಗೆ ಹಿಡಿದ ಜ್ವರ ಬಿಡಲಿಲ್ಲ. ಕೊನೆಗೆ ರಾಮರಾಯರಲ್ಲಿ ಹೋಗಿ ದಮ್ಮಯ್ಯ ಹಾಕಿದೆ. 'ನನ್ನಲ್ಲಿ ಕಾಸಿಲ್ಲ– ಮಗುವನ್ನೊಂದು ಉಳಿಸಿದ ಪುಣ್ಯ ಬರುತ್ತದೆ' ಅಂದೆ. ಅರ್ಧ ಊಟದಲ್ಲೇ ಬಿಟ್ಟು, ನನ್ನ ಮನೆಯವರೆಗೂ ಬಂದು, ಇಂಜೆಕ್ಷನ್ ಕೊಟ್ಟು ಹೋದರು. ಮಗುವೂ ಹುಷಾರಾಯಿತು. ಅವರಾಗಿ ಒಂದು ಕಾಸು ಕೇಳಲಿಲ್ಲ. ನಾನೇ ಅವರ ಋಣ ಉಳಿಸಬಾರದು ಎಂದು ಎರಡು ಕೋಲುದ್ದರ ಮರಸಣಿಗೆಯನ್ನು ಅವರ ಮನೆಗೆ ಮುಟ್ಟಿಸಿ, ' ಅಯ್ಯೋ ಇದೇ ಬಡವನಿಂದಾಗುವುದು; ಏನಾದರೂ ಬಿಟ್ಟಿಬೇಗಾರಿದ್ದರೆ ಪಾಟಾಳಿ ಪರಮಯ್ಯನಿದ್ದಾನೆ ಎಂದೆ. . . .

ಸುಬ್ಬನಿಗೂ ತಡೆಯಲಿಲ್ಲ. 'ನೀನು ಪರಮಯ್ಯ, ಅಮಟೆಕಾಯಿಯನ್ನು ಅಮರಾವತಿ ಮಾಡುವವ. ಅವರು ನಿನಗೆ ಉಪಕಾರ ಮಾಡಿದರಾಯಿತೇ? ಚನ್ನಪ್ಪಯ್ಯ ಅವರಿಗೆ ಅಷ್ಟು ಹಣ ಸುರವಿದರಲ್ಲ. ನಾನು ಅವರ ಎಡಗೈ. ಏನೋ ಮೈ ಒಣಗುತ್ತ ಬಂದಿದೆ– ಒಂದು ಇಂಜೆಕ್ಷನ್ ಕೊಡಿ–ಎಂದೆ. ನಗುತ್ತ ಕಾಲಹರಣ ಮಾಡಿದರೇ ವಿನಾ ಮಾತನಾಡಲಿಲ್ಲ'. ಕಡೆಗೆ ನಾನೇ ಇಂಜೆಕ್ಷನ್ ನಳಿಗೆ ತಂದು, ಅವರ ಮನೆಗೆ ಹೋಗಿ, ಇನ್ನಾದರೂ ಅಷ್ಟು ಮದ್ದು ಚುಚ್ಚಿ ಅಂದೆ. ಆಸ್ಪತ್ರೆಗೆ ಬಾ. ಅದೆಲ್ಲ ಮನೆಯಲ್ಲಲ್ಲ' ಎಂದರು .ಅಬ್ಬ, ನಮ್ಮ

(ಮುಂದಿನ ಪುಟಕ್ಕೆ)

(ಹಿಂದಿನ ಪುಟದಿಂದ)

# ರೂರಲ್ ಅಸ್ಪತ್ರೆ ರಾಮರಾಯರು

ಹಳ್ಳಿಯಲ್ಲೂ ಆಸ್ಪತ್ರೆ, ಮನೆ-ಎಂದು ಡೌಲು ಮಾಡುತ್ತಾರಲ್ಲ. ನೋಡುವ ಒಂದು ದಿನ ಸಿಕ್ಕಿಯಾರು ನನ್ನ ಕೈಗೆ.

'ಹಾಗೆಲ್ಲ ಮಾಡಬೇಡ; ಏನು ಸಂಗತಿಯೆಂದು ನಾನು ರಾಮರಾಯರನ್ನು ಕೇಳಿ ಹೇಳುತ್ತೇನೆ. ಅವರು ಅಂಥಾ ಜನವೇ ಅಲ್ಲ ' ಹೀಗೆಂದು ಮಾತು ಮುಗಿಸಿ ಪರಮಯ್ಯ ಹೊರಟ. ಸುಬ್ಬಭಟ್ಟರ ಸವಾರಿ ಉಡುಪಿಗೆ ಹೋಗಿ ಬರುತ್ತೇನೆ ಎಂದು ಹೊರಟಿತು. ಅದೇ ದಿವಸ ಸಂಜೆಯಲ್ಲಿ ಪರಮಯ್ಯನ ಸವಾರಿ ಕಿವಿಯನ್ನು ತುರಿಸುತ್ತ ಡಾಕ್ಟರರ ಮನೆಗೆ ಹೋಯಿತು.

'ಏನು ಬಂದೆ ಪರಮ?' ಎಂದು ಡಾಕ್ಟರರು ಕೇಳಿದರು. ಪರಮಯ್ಯ ಕೂಲಂಕುಷವಾಗಿ ಸಂಗತಿ ಹೇಳಿ 'ನನಗೆ ತಿಳಿಯದೆ ಕೇಳುತ್ತೇನೆ ಡಾಕ್ಟರರೇ, ಆ ಸುಬ್ಬಣ್ಣನಿಗೆ ನಾಲಿಗೆ ದೊಡ್ಡದು, ಆದರೆ ಅವನಲ್ಲಿ ಮತ್ತೇನೂ ದೋಷವಿಲ್ಲ. ಬಸವ ಎಂಬುದು ನಿಜ. ಪಾಪಾ, ಹೋಗಲಿ ಒಂದು ಇಂಜೆಕ್ಷನ್ ಕೊಟ್ಟು ಬಿಡಿ ನಿಮಗೇನು? ಅವನೇ ಮದ್ದನ್ನು ತರುತ್ತಾನಲ್ಲ. ಸಾಯಲಿ, ಅಂದರೆ ನೋಡಿ-ಚನ್ನಮಯ್ಯರಿಗೆ ಅವನು ಬೇಕಾದವನು. ಉಪಕಾರವಾಗದಿದ್ದರೂ ಅವನಿಂದ ಉಪತ್ರ ಆಗಲಿಕ್ಕೆ ಅಡ್ಡಿಯಿಲ್ಲ . . . ನಮ್ಮೂರು ನೋಡಿ, ಡಾಕ್ಟರರೇ, ಎಲ್ಲರೂ ತೇಗೆದಿಟ್ಟವರು! ಎಂದು ದೀರ್ಘ ಭಾಷಣವನ್ನು ಮಾಡಿದ.

ಡಾಕ್ಟರರು ನಗುತ್ತ ತಾಳ್ಮೆಯಿಂದ 'ಪರಮಯ್ಯ, ನೀನು ಬೆಳ್ಳಗಿದ್ದುದೆಲ್ಲ ಹಾಲೆನ್ನುವ ಜಾತಿ, ಸುಬ್ಬಣ್ಣನಿಗೆ ಹೆದರಿ ನಾನು ಊರು ಬಿಡಬೇಕೆ? ಅವನಂಥವರಿಗೆ ಸಹಾಯ ಮಾಡಿ ಏನೋ ಲಾಭವಿಲ್ಲ. ಅವ ಬಡವ ನಿಜ. ಆದರೆ, ಚನ್ನಮಯ್ಯರನ್ನು ಹಾಳುಗೆಡಿಸಿ ಕುಣಿಸುವವರು ಯಾರು? ಅವನು ನಿಜವಾಗಿಯೂ ತನಗೆ ಇಂಥದೇ ಕಾಯಿಲೇ ಎಂದು ಹೇಳಿದರೆ-ಒಂದು ಲೆಕ್ಕ ಮೈ ಒಣಗುತ್ತದೆ ಎಂದು ಹೇಳಿ, ಫರಂಗಿ ರೋಗದ ಮದ್ದನ್ನು ನನಗೆ ತಂದು ತೋರಿಸುತ್ತಾನೆ. ಪರಮ, ರೋಗ ತಕ್ಕೊಳ್ಳುವುದಕ್ಕೆ ಇವನಿಗೆ ಕಾಸುಂಟು. ಮದ್ದಿಗೆ ಕಾಸಿಲ್ಲವೇನು? ಹೆಣ್ಣುಗಳ ಹಿಂದೆ ಸುತ್ತಾಡುವ ಈ ಮಕ್ಕಳಿಗೆ, ಕೊಂದರೂ ನಾನು ಧರ್ಮ ಮಾಡುವವನಲ್ಲ. ಆಸ್ಪತ್ರೆಗೆ ಬಂದರೆ, ಲೆಕ್ಕಾಚಾರದ ಮದ್ದನ್ನು ಕೊಟ್ಟು ಕುಳಿತೇನು' ಎಂದರು.

ಪರಮಯ್ಯನಿಗೆ ಸುಬ್ಬಣ್ಣಭಟ್ಟನ ಕಾಯಿಲೆಯ ಸುದ್ದಿಯ ಚೂರು ಸಿಕ್ಕಿದ್ದೆಂಬದು ಒಂದು ಲಾಭವಾಯಿತು. 'ನಿಮ್ಮ ಪೈಂಟು ಬರಾಬರಿ, ತಿಂದು ಸೊಕ್ಕಿ ತಂದುಕೊಂಡ



ರಾಮರಾಯರನ್ನು ಊರವರ ಕಲಹಗಳಲ್ಲಿ ಎಳೆತರಲು ಪ್ರಯತ್ನಿಸಿದವರು ಬಹಳ, ಅವರು ಬಲು ಜಾಗ್ರತೆಯಿಂದಲೇ ಇದ್ದಾರೆ. ಮೊನ್ನೆ ಅತಿಶಯ ಉತ್ಸಾಹದಿಂದ ಕಾಂಗ್ರೆಸು ಕಮಿಟಿಯನ್ನು ಮಾಡಿ, ಸತ್ಯ, ಅಹಿಂಸಾ ತತ್ವಗಳ ಪ್ರಚಾರಕ್ಕೆ ಅವರು ಪ್ರಯತ್ನಿಸಿದರು. ಅದರ ಫಲ ತಿಳಿಯಿತು. ಅತ್ತ ಚನ್ನಮಯ್ಯರು, ಇತ್ತ ಮೂಸೆ ಬ್ಯಾರಿಗಳು, ಮಗದೊಂದು ಕಡೆಯಲ್ಲಿ ನಾಗಯ್ಯಸೆಟ್ಟರು- ಎಲ್ಲರಿಗೂ ಬೇಡದವರಾಗಿ ಕುಳಿತರು. ಈಗೀಗ ಅವರಿಗೆ ಅನಿಸತೊಡಗಿದೆ; 'ಯಾರ ಪಕ್ಷಕ್ಕೂ ನಾನು ಹೋಗಲಿಲ್ಲವೆಂದರೆ ಯಾರಿಗೂ ಬೇಡವಾದೇನು. ಯರದ್ದಾದರೂ ಆಶ್ರಯ ಬೇಕೇಬೇಕು. ಆದರೆ, ಈ ಹಳ್ಳಿಯಲ್ಲಿ ಯಾರನ್ನು ಹಿಡಿಯಲಿ? ಯಾರನ್ನು ಬಿಡಲಿ? ಎಂಬ ತೊಡಕಿನಲ್ಲಿದ್ದಾರೆ.

ಜಡಕ್ಕೆ ನೀವು ದಂಡ ತರುವುದೆಂದರೆ ಅರ್ಥವಿಲ್ಲ' ಎಂದು ಅವನೂ ಹೇಳಿದ.

ರಾಮರಾಯರು ನಮ್ಮ ಹಳ್ಳಿಯ ಜೀವನದಲ್ಲಿ ಸಿಲುಕಿ ಮೂರು ವರ್ಷವಾಯಿತು. ಎರ್ಮಾಳದಿಂದ ಬಂದ ಶಿವಳ್ಳಿ ಬ್ರಾಹ್ಮಣರು ಅವರು. ಕಾಲೇಜಿನಲ್ಲಿ ಓದುತ್ತಿದ್ದಾಗ ಅವರಿಗೆ ದೇಶೋದ್ಧಾರದ ಹುಚ್ಚು ಅಷ್ಟಿಷ್ಟಲ್ಲ. ಅದಕ್ಕೇನೆ ಶಾಲೆ ಬಿಟ್ಟು ಜೈಲಿಗೆ ಹೋಗುವ ಯೋಚನೆ ಮಾಡಿದ್ದರು.ಅದು ತಿಳಿದ ತಕ್ಷಣ, ಅವರ ಅಪ್ಪ ಹಯವದನ ಯರ್ಬುಡತ್ತಾಯರು ಮಗನಲ್ಲಿ ಓಡಿಬಂದು- 'ಮಗನೆ, ನಿನಗಾಗಿ ಆಸ್ತಿಮಾರಿ ಇಂಗ್ಲಿಷು ಪಾಠ ಮಾಡಿಸಿದರೆ – ನೀನು ಯಾವುದೊಂದು ಸಾರ್ಥಕಕ್ಕೆ ಬಾರದ ಕೆಲಸ ಮಾಡುತ್ತೀಯೇನು? ಎಂದು ಅತ್ತರು. ರಾಮಣ್ಣನ ಸವಾರಿ ದೇಶದ ದಾರಿದ್ರ್ಯದ ಮೇಲೆ ಒಂದು ಉಪನ್ಯಾಸವನ್ನು ಮಾಡಿತು. ಅದಕ್ಕೆ ತಂದೆ ' ಮಗು, ಊರು ಉದ್ಧಾರ ಮಾಡುವನು ಪರಮಾತ್ಮ, ಮನುಷ್ಯನಿಂದೇನು ಆದೀತು? ನಿನಗೆ ಅಷ್ಟು ಮನಸ್ಸಿದ್ದರೆ, ಮುಂದೆ ವಕೀಲನಾಗಿ ಕೆಲಸ ನೋಡಿ, ಸಂಪಾದನೆ ಮಾಡಿ, ನಿನ್ನ ಜೀವನ ನಡೆಸಿ, ಹಣ ಉಳಿದರೆ, ಬೇಕಾದವರಿಗೆ ಉಪಕಾರ ಮಾಡು. ತನ್ನನ್ನು ಕೆಡಿಸಿಕೊಂಡು ಊರಿಗೆ ಉಪಕಾರವೇ? ಎಂದು ಯುಕ್ತಿಯಿಂದ ಮಾತನಾಡಿದರು ಮೇಲೆ ಕಣ್ಣೀರನ್ನೂ ಸುರಿಸಿದರು.

ರಾಮರಾಯರಿಗೆ ಆಗ ಚಿಕ್ಕ ವಯಸ್ಸು; ಮೃದು ಮನಸ್ಸು ಧಾರಾಳವಾಗಿತ್ತು. ಆದುದರಿಂದಲೇ, ತನ್ಮೂಲಕ ತನ್ನಲ್ಲಿ ಮನೆ ಮಾಡಿದ ಆವೇಶವನ್ನು ತಡೆದುಕೊಂಡರು. ಇಂಟರ್ ಪರೀಕ್ಷೆಯಾಯಿತು, ಮುಂದೆ ವಕಾಲತ್ತೋ ಡಾಕ್ಟರಿಕೆಯೋ ಎಂದು ತೂಗಿ, ತೂಗಿನೋಡಿ, ಬಳಿಕ ತಂದೆ ಯರ್ಬುಡತ್ತಾಯರಿಗೆ ಏನೇನೊ ಸಮಾಧಾನವಿಲ್ಲದ, ಹೆಣಸಿಗಿಯುವ ಡಾಕ್ಟರಿಕೆಯನ್ನು ಕಲಿಯಲು ಯೋಚನೆ ಮಾಡಿದರು. ಮಾಡಿದ ಮೇಲೆ ಮದ್ರಾಸು ವನವಾಸ ಮುಗಿಸಿ ಊರಿಗೆ ಬಂದರು. 'ಇನ್ನು ಮುಂದೆ ಏನು? ಎಂಬ ಪ್ರಶ್ನೆ ಬಂದಿತು. ಅತ್ತಲಾಗಿ ಜಾತಕಗಳ ರಾಶಿಗಳೂ ಬಂದು ಸುರಿದವು. ಯಥಾವತ್ತಾಗಿ ಒಂದು ಮದುವೆ ಎನ್ನುವುದನ್ನು ಮಾಡಿಕೊಂಡು – ಬೋರ್ಡಿನ ಆಶ್ರಮದಲ್ಲಿ ರೂರಲ್ ಆಸ್ಪತ್ರೆಯ ಆಫೀಸರರಾಗಿ ನಮ್ಮ ಊರಿಗೆ ಬಂದರು. ಬರುವಾಗಲೇ ಅವರ ತಂದೆ 'ಕೋಟದವರ ಹಿಂಡು ಅಲ್ಲಿ ಜಾಸ್ತಿ . . . ಏನೋ ಮಾಡಿಯಾರು' ಎಂಬ ಎಚ್ಚರಿಕೆಯನ್ನು ಕೊಟ್ಟಿದ್ದರು. ರಾಮರಾಯರು ಶಿವಳ್ಳಿಯವರು

(ಮುಂದಿನ ಪುಟಕ್ಕೆ)



ಅರಳಿ ನಿಂತ ಚಂದದ ಹೂವೆ ಯಾವ ಗಾಳಿಗೆ ನಲುಗಿರುವೆ।
ನಿದ್ದೆಗೆಟ್ಟು ಒಂಟಿಯಾಗಿ ನೀ ಅವನ ಬರುವಿಗೆ ಕಾದಿರುವೆ॥
–ಎಚ್.ಎಸ್.ಶಿವಪ್ರಕಾಶ್





(ಹಿಂದಿನ ಪುಟದಿಂದ)

# ರೂರಲ್ ಅಸ್ಪತ್ರೆ ರಾಮರಾಯರು

ಎಂದು ಕೇಳಿದೊಡನೆಯೇ 'ಹಾ – ಉಡುಪಿಯ ಪಿಳ್ಳೆ ನಮ್ಮೂರಿಗೇನು? ಆಗಲಿ, ಯಾವ್ಯಾವ ಜಾತಿಯವರು ಬರುವುದಕ್ಕಿಂತ ಬ್ರಾಂಬ್ರೆ ಬಂದರಲ್ಲ' ಎಂದು ಸತ್ತೈತಾಳರ ಹಾಗಿನವರಿಗೆ ಸಮಾಧಾನವಾಯಿತು.

ರಾಮರಾಯರು ಇನ್ನೂ ಹುಡುಗ ಗತಿಯಿಲ್ಲ, ಒಂದು ಹೆರಿಗೆ ಮಾಡಿಸಿಕೊಡಬೇಕು' ಎಂದು ಅತ್ತರೆ ಅವರೇನು ಮಾಡುವುದು? ಕ್ರಮೇಣ– ಊರಲ್ಲಿ, ನಿಜವಾಗಿ ಗಂಜಿಗೆ ಗತಿಯಿರುವವರು ಯಾರು? ಇಲ್ಲದವರು ಯಾರು – ಎಂಬುದು ತಿಳಿಯಿತು. ಆದ್ದರಿಂದ 'ಮನೆಗೆ ಬನ್ನಿ' ಎಂದು ಕರೆದರೆ, 'ಫೀಸು' ಎಂದು ಬಾಯಿ ತೆರೆಯತೊಡಗಿದರು. ಆಗ ಬಂತು ಕೇಡು ! 'ಅಬ್ಬಾ, ಡಾಕ್ಟರರಿಗೆ ದುಡ್ಡಿನ ಅಂಕರು ಹಿಡಿದಿದೆ' ಎಂದು ಪುಕಾರು ಹೊರಟಿತು. ಉಪಾಯವಿಲ್ಲದೆ ದುಡ್ಡು ಕೊಟ್ಟ ಮಹಾನುಭಾವರು 'ಬರೀ ಕಹಿನೀರು ಕೊಟ್ಟದ್ದು ಡಾಕ್ಟರರು. ೧೫ ದಿವಸ ಕುಡಿದು ಊರವರೂ ದುಡ್ಡುಕೊಟ್ಟು ಮದ್ದುಕೊಳ್ಳುವ ದುಶ್ಚಾಳಿಯನ್ನು ಕಲಿಯುತ್ತಿರುವುದು ಈಗೀಗ. ಕೇಳು ವೈದ್ಯನ ಕಷಾಯದ ಕುಡ್ತೆಗೆ ಆರಾಣೆ ಬೆಲೆಯಾದರೂ ನಷ್ಟವೆಂದು ತಿಳಿಯುವುದಿಲ್ಲ. ಕಾರಣ – ಒಂದು ಕುಡ್ತೆ ಕಷಾಯ ಬಿದ್ದರೆ, ಕನಿಷ್ಟ ನೂರು ಜಡಜಾಪತ್ತುಗಳನ್ನು ಗುಣಮಾಡುವ ಶಕ್ತಿ ಅದಕ್ಕಿದೆ. ಆಸ್ಪತ್ರೆ ನೀರನ್ನು ಕುಡಿದರೆ, ಅದು ಜ್ವರವನ್ನು ನಿವಾರಿಸುವುದೂ ಸಂಶಯ– ಎಂಬುದು ಅವರ ತಿಳಿವು.

ರಾಮರಾಯರನ್ನು ಊರವರ ಕಲಹಗಳಲ್ಲಿ ಎಳೆತರಲು ಪ್ರಯತ್ನಿಸಿದವರು ಬಹಳ, ಅವರು ಬಲು ಜಾಗ್ರತೆಯಿಂದಲೇ ಇದ್ದಾರೆ. ಮೊನ್ನೆ ಅತಿಶಯ ಉತ್ಸಾಹದಿಂದ ಕಾಂಗ್ರೆಸು ಕಮಿಟಿಯನ್ನು ಮಾಡಿ, ಸತ್ಯ, ಅಹಿಂಸಾ ತತ್ವಗಳ ಪ್ರಚಾರಕ್ಕೆ ಅವರು ಪ್ರಯತ್ನಿಸಿದರು. ಅದರ ಫಲ ತಿಳಿಯಿತು. ಅತ್ತ ಚನ್ನಮಯ್ಯರು, ಇತ್ತ ಮೂಸೆ ಬ್ಯಾರಿಗಳು, ಮಗದೊಂದು ಕಡೆಯಲ್ಲಿ ನಾಗಯ್ಯಸೆಟ್ಟರು– ಎಲ್ಲರಿಗೂ ಬೇಡದವರಾಗಿ ಕುಳಿತರು. ಈಗೀಗ ಅವರಿಗೆ ಅನಿಸತೊಡಗಿದೆ; 'ಯಾರ ಪಕ್ಷಕ್ಕೂ ನಾನು ಹೋಗಲಿಲ್ಲವೆಂದರೆ ಯಾರಿಗೂ ಬೇಡವಾದೇನು. ಯರದ್ದಾದರೂ ಆಶ್ರಯ ಬೇಕೇಬೇಕು. ಆದರೆ, ಈ ಹಳ್ಳಿಯಲ್ಲಿ ಯಾರನ್ನು ಹಿಡಿಯಲಿ? ಯಾರನ್ನು ಬಿಡಲಿ? ಎಂಬ ತೊಡಕಿನಲ್ಲಿದ್ದಾರೆ. ಸಂಜೆ ಬೇಸರವಾದರೆ ಯಾರನ್ನೂ ಕರೆದು ಮಾತನಾಡಿ ಸುವಂತಿಲ್ಲ.



ವೃತ್ತಿಯೆಂದರೆ ನೂರಾರು ನರಳುವ ಜೀವಿಗಳನ್ನು ಉಳಿಸುವ ಸಂದರ್ಭ ಎಂದು ತಿಳಿದಿದ್ದರು. ಆಸ್ಪತ್ರೆ ಧರ್ಮದ್ದು; ಮದ್ದು ಕೊಡುವವರು ಬ್ರಾಹ್ಮಣರು– ಎಂದು ಕೇಳಿ, ಕಾಯಿಲೆ ಇದ್ದವರೂ, ಇಲ್ಲದವರೂ ಸಾಲು ಸಾಲಾಗಿ ಬರತೊಡಗಿದರು. ಬ್ರಾಹ್ಮಣರ ಹಿಂಡಿಗೆ ಹಿಂಡೇ ಅವರ ಆಸ್ಪತ್ರೆಗೆ ಹೋಗುವುದನ್ನು ನೋಡಿ ನಾಗಯ್ಯ' ಇದೇನು, ಆಸ್ಪತ್ರೆ ಎಂದರೆ ಭೋಜನ ಶಾಲೆಯೇನು? ಎಂದು ನಗಾಡಿದ್ದೂ ಉಂಟು.

ಬಂದ ಒಂದು ವರ್ಷ ಡಾಕ್ಟರಿಗೆ ಉಸಿರಿಗೇ ಬಿಡುವಿಲ್ಲ. ವಿಸಿಟು, ವಿಸಿಟು, ವಿಸಿಟು! ಪ್ರತಿಫಲವೆಂದರೆ, ಸರಕಾರಿ ಗ್ರಾಂಟು ಮದ್ದಿಗೆ ಸಾಲದು; ಮನೆಯಲ್ಲಿರಲಿಕ್ಕೆ ಪುರಸೊತ್ತೂ ಸಾಲದು; ಹೆಂಡತಿಗೆ ಗಂಡನ ಭೇಟಿಯಾಗುವುದು ಊಟದ ಕಾಳದಲ್ಲಿ ಮಾತ್ರ. ಇತ್ತ ಊಟಕ್ಕೆ ಹರಹರ. ಆದರೆ, ಆರು ಏಳು ಕೋರ್ಜಿ ಅಕ್ಕಿಯಿರುವ ಹಳ್ಳಿಯವರೂ ಸಹ ಕೌಪೀನಧಾರಿಗಳಾಗಿ ಬಂದು 'ಏನೂ ನೋಡಿಯಾಯಿತು, ಏನಾದರೂ ಫಲವಿದೆಯೇ !' ಎನ್ನತೊಡಗಿದರು.

ಈಗ ರಾಮರಾಯರು ಊರವರ ವಿಷಯದಲ್ಲಿ ತುಸು ಎಚ್ಚರವಾಗಿದ್ದಾರೆ. ತೀರ 'ಗೋಕರ್ಣ'ಕ್ಕೆ ಅವರು ಸಿದ್ಧರಾಗಿಯೇ ಇಲ್ಲ. ಏನೋ ಬಡವರೆಂದು ಖಾತ್ರಿಯಾದರೆ, ತಮ್ಮಿಂದಾಗುವ ಸಹಾಯ ಮಾಡುತ್ತಾರೆ. ಅಲ್ಲದೆ, ಅವರ ಮನೆಯ ಖರ್ಚು ವೆಚ್ಚವೂ ಏರಿದೆ. ಸಂಸಾರದಲ್ಲಿ ಒಂದು ಕೂಸು ಹೆಚ್ಚಾಗಿದೆ. ತಂದೆಯವರು ತೀರಕೊಂಡುದರಿಂದ, ಎರ್ಮಾಳದಿಂದ ತಾಯಿಯನ್ನೂ ಕರೆದು ತಂದಿದ್ದಾರೆ.ಜತೆಗೆ ಒಬ್ಬಿಬ್ಬರೂ ತಂಗಿಯರಿದ್ದಾರೆ. ಇವರೆಲ್ಲರೂ ಉಣ್ಣುವ ಅಭ್ಯಾಸವನ್ನು ಕಲಿತವರಾದುದರಿಂದ, ಕಾಸಿಲ್ಲದೆ ಸಂಸಾರ ಸಾಗುವಂತಿಲ್ಲ. ಹೀಗಾಗಿ ರಾಮರಾಯರು ಬಾಯಿಬಿಟ್ಟು 'ಕಾಸು' ಎಂದು ಜನರನ್ನು ಕೇಳಿ, ದ್ವೇಷ ಕಟ್ಟಿಕೊಳ್ಳುವಂತಾಗಿದೆ.

ಏನು ಮಾಡುವುದು? ನಮ್ಮ ಹೀಗಾಗಿ ಹೆಂಡತಿಯನ್ನು ಕರೆದು ಕೊಂಡು, ಮಗುವನ್ನು ಹೊತ್ತುಕೊಂಡು, ತಮ್ಮಷ್ಟಕ್ಕೇ ವಾಕಿಂಗಿಗೆ ಹೋಗುತ್ತಾರೆ. ಅದೂ ಕಷ್ಟವೇ ! ನಮ್ಮ 'ರೂರಾರರಿಗೆ' ಗೆ ಇದು ಮುಂಬಯಿ ಶಹರು ಎಂದು ತಲೆಯಲ್ಲಿದೆ. ಅಲ್ಲವಾದರೆ ನಮ್ಮ ಹಳ್ಳಿಯಲ್ಲಿ ಇವರ ವಾಕಿಂಗು–ಗೀಕಿಂಗು ಯಾಕೆ ಬೇಕು? ಯಾರು ಇವರ ಡೌಲನ್ನು ನೋಡಿ 'ಭೇಷ್ ಎನ್ನುತ್ತಾರಂತೆ' ಎನ್ನತೊಡಗಿದ್ದಾರೆ. ಇನ್ನು ಕೆಲವರು 'ಆಸ್ಪತ್ರೆಗೆ ಈಗ ಜನರೇ ಬರುವುದಿಲ್ಲ' ಎಂದು ಕಾಣುತ್ತದೆ ಎನ್ನುತ್ತಾರೆ.

**(ಕೆ.ವಿ. ಸುಬ್ಬಣ್ಣ ನೆನಪಿನ 'ಮೊದಲ ಓದು ಪುಸ್ತಕ ಮಾಲೆಯ ಶಿವರಾಮ ಕಾರಂತ ಅವರ ಆಯ್ದ ಬರಹಗಳು' ಕೃತಿಯಿಂದ. ಪ್ರ– ಅಕ್ಷರ ಪ್ರಕಾಶನ ಹೆಗ್ಗೋಡು)** ◆





ಮಧುರ ಮಧುವಿನ ಸೊಗಸುಗಾತಿಯೆ ಯಾವ ಕನಸ ಕಾಣುತಲಿರುವೆ।
ತಿಂಗಳಿನ ತಿಳಿ ಬೆಳಕಲಿ ಹಾದು ಬಳ್ಳ ಮಾಡಕವ ಬರುವುದನ॥
–ಎಚ್.ಎಸ್.ಶಿವಪ್ರಕಾಶ್

# ಕಾಮದ ಹಲವು ಮಜಲುಗಳನ್ನು ಕಾವ್ಯಕ್ಕೆ ತಂದ ಜನ್ನ



## ಪೂರ್ವಕವಿಗಳಿಗೆ ನಮನ

• ಡಾ.ಜೆ.ಕೆ.ರಮೇಶ

ಪಂಪ ಪೊನ್ನ ರನ್ನ ಜನ್ನ ಎಂಬ ಎರಡಕ್ಷರದ ಮುದ್ದಾದ ನಾಲ್ಕು ಹೆಸರುಗಳು ಕನ್ನಡ ಜನರ ನಾಲಿಗೆಯ ಮೇಲೆ ನಿರಂತರ ನಲಿದಾಡುತ್ತಿವೆ. ಇವುಗಳಲ್ಲಿ ಕೊನೆಯದಾದ ಜನ್ನ ಎಂಬುದರ ಪೂರ್ಣರೂಪ ಜನಾರ್ಧನ ಕವಿ ಎಂದು. ಜನ್ನಯ್ಯ, ಜನ್ನಮರಸ, ಜನ್ನಿಗ, ಜಾನಕಿ ಎಂಬಿತ್ಯಾದಿ ಇತರ ಪರ್ಯಾಯ ರೂಪಗಳೂ ಇದಕ್ಕಿವೆ. ಜನ್ನ ಮೊದಲ ಮೂವರಿಗಿಂತ ಕಾಲದ ದೃಷ್ಟಿಯಿಂದ ದೂರದವ. ಅವರೆಲ್ಲ ಕ್ರಿ.ಶ. ಹತ್ತನೆಯ ಶತಮಾನದವರಾದರೆ ಜನ್ನ ಬದುಕಿದ್ದು ಹನ್ನೆರಡು – ಹದಿಮೂರನೇ ಶತಮಾನದ ಸಂಧಿಕಾಲದಲ್ಲಿ. ಮಿಕ್ಕವರಂತೆ ರತ್ನತ್ರಯರಲ್ಲಿ ಒಬ್ಬನಾಗದೆ ಕವಿ ಚಕ್ರವರ್ತಿಗಳ ಗುಚ್ಛದಲ್ಲಿ ಸೇರಿಕೊಂಡಿದ್ದಾನೆ. ಕ್ರಿ.ಶ. ೧೧೭೩ರಿಂದ ೧೨೨೦ರ ವರೆಗೆ ಆಳಿದ ಹೊಯ್ಸಳ ಚಕ್ರವರ್ತಿ ವೀರ ಬಲ್ಲಾಳನಿಂದ ಈ ಬಿರುದು ಆತನಗೆ ದೊರೆತಿದೆ. ನಂತರದ ನರಸಿಂಹನ ಓಲಗದಲ್ಲಿ 'ನಿಂದಿರೆ ದಂಡಾದೀಶ ಕುಳ್ಳಿರೆ ಮಂತ್ರಿ ತೊಡಂಕೆ ಕವಿ' ಯಾಗಿದ್ದೆನೆಂದು ಹೇಳಿಕೊಂಡಿದ್ದಾನೆ. ಹೀಗಾಗಿ ಜನ್ನ ದ್ವಾರಸಮುದ್ರ ಅಥವಾ ಈಗಿನ ಹಳೇಬೀಡು ಪ್ರಾಂತದವನಾಗಿದ್ದು ಶ್ರೀಮಂತನೂ ಸನ್ಮಾನ್ಯನೂ ಆಗಿದ್ದನೆನ್ನಬಹುದು. ಉದಾರಚರಿತನಾಗಿದ್ದ ಈತ ರಸಿಕಾಗ್ರೇಸರನೂ ಆಗಿದ್ದ. ಮೇಲಾಗಿ ಅವನ ಕಾವ್ಯರಚನಾಶಕ್ತಿಯ ಮೂಲವೂ ಪೋಷಕವೂ ಆದ ಸಾರಸ್ವತ ಪರಿಸರವನ್ನು ಪಡೆದಿದ್ದ. ಇವನ ತಂದೆ ಕವಿಸುಮನೋಬಾಣ ಶಂಕರ. ಶಾಸ್ತ್ರಕಾರ ಎರಡನೇ ನಾಗವರ್ಮ ಈತನ ಗುರು. ಸೂಕ್ತಿ ಸುಧಾರ್ಣವ ಸಂಕಲನದಿಂದ ಖ್ಯಾತಿವೆತ್ತ ಮಲ್ಲಿಕಾರ್ಜುನ ಇವನ ಭಾವ. ಅವನ ಮಗ ಪ್ರಸಿದ್ಧ ವೈಯ್ಯಾಕರಣಿ ಕೇಶಿರಾಜ ಜನ್ನನ ಸೋದರಳಿಯ. ಆಧುನಿಕ ಕನ್ನಡ ಸಾಹಿತಿಗಳಲ್ಲಿ ಇಂತಹ ಹಿನ್ನೆಲೆ ಹೊಂದಿದವರಿದ್ದಾರೆ. ಆದರೆ ಪ್ರಾಚೀನರಲ್ಲಿ ಜನ್ನನಿಗಷ್ಟೇ ಈ ಪ್ರತಿಭಾಪರಿವೇಶ ದೊರಕಿಕೊಂಡಿತ್ತು. ಒಟ್ಟಿನಲ್ಲಿ ಕುಲದ ಉನ್ನತಿ, ವಿದ್ಯೆ, ಸೌಂದರ್ಯ, ಸಂಪತ್ತು, ಅಧಿಕಾರ, ಕೀರ್ತಿ ಎಲ್ಲವನ್ನೂ ಪಡೆದಿದ್ದ ಭಾಗ್ಯವಂತ ಜನ್ನ ಎನ್ನಬಹುದು. ಆದ್ದರಿಂದಲೇ ಆತನ



ಆತ್ಮಪ್ರತ್ಯಯವೂ ಹೆಚ್ಚಿನದೇ ಆಗಿದ್ದು ತನ್ನನ್ನು ಅತಿಯಾಗಿ ಪ್ರಶಂಸಿಸಿಕೊಂಡಿದ್ದಾನೆ. ಇತರ ಕವಿಗಳನ್ನು ತೆಗಳಿಯೂ ಇದ್ದಾನೆ. ಜನ್ನ ತನ್ನೆಲ್ಲ ಭೋಗ ವೈಭವಗಳ ನಡುವೆಯೂ ಆಧ್ಯಾತ್ಮಿಕ ಆಸಕ್ತಿಯನ್ನು ಉಳಿಸಿಕೊಂಡು ಜೈನಧರ್ಮ ಪರಿಪಾಲನೆ ಮಾಡಿದ್ದಲ್ಲದೆ ಸಾಹಿತ್ಯ ಕೃತಿಗಳ ಮೂಲಕ ಬಸದಿ ನಿರ್ಮಾಣ ಮುಂತಾದ ಕಾರ್ಯಗಳ ಮೂಲಕ ಧರ್ಮ ಪ್ರಚಾರವನ್ನೂ ಕೈಗೊಂಡನೆಂಬುದು ಗಮನಿಸಬೇಕಾದ ಸಂಗತಿ.

ಶಾಸನಗಳನ್ನೂ ಪರಿಗಣಿಸಿ ಹೇಳುವುದಾದರೆ ಜನ್ನನ ಕೃತಿಗಳು ಐದು. ೧೧೯೦–೯೧ರಲ್ಲಿ ರಚಿತವಾದ ಆನೆಕೆರೆ (ಚನ್ನರಾಯ ಪಟ್ಟಣ) ಶಾಸನ, ೧೧೯೭ರಲ್ಲಿ ಬರೆದ ಅಮೃತಾಪುರ (ತರೀಕೆರೆ) ದ ಶಾಸನ, ಬಹುಶಃ ಇವುಗಳ ನಂತರದ ರಚನೆ ಅನುಭವ ಮುಕುರ, ೧೨೦೯ರ ಯಶೋಧರ ಚರಿತೆ ೧೨೩೦ರಲ್ಲಿನ ಅನಂತನಾಥ ಪುರಾಣ. ಆನೆಕೆರೆಯದು ಸುದೀರ್ಘವಾದ ತಾಮ್ರ ಶಾಸನ. ಅಮೃತಾಪುರದ್ದು ಶಿಲಾ ಶಾಸನ. ಎರಡರ ವಿಷಯವೂ ದತ್ತಿದಾನ. ಎರಡರಲ್ಲಿಯೂ ಹೊಯ್ಸಳ ವಂಶದ ದೊರೆಗಳ ವರ್ಣನೆ ಕಂದ ವೃತ್ತ ವಚನ ರಚನೆಯ ಮೂಲಕ ಮೂಡಿಬಂದಿದೆ. ಕೈಪಳಗಿಸಿಕೊಳ್ಳುತ್ತಿದ್ದ ಆರಂಭಿಕ ಕವಿಯ ಗುಣದೋಷಗಳು ಇಲ್ಲಿ ಕಾಣಿಸಿಕೊಂಡಿವೆ. ಇವಲ್ಲದೆ ಇನ್ನೂ ಎರಡು ಶಾಸನಗಳನ್ನು ಜನ್ನನೇ ರಚಿಸಿದ್ದಾನೆಂದು ವಿದ್ವಾಂಸರು ಅನುಮಾನಿಸಿದ್ದಾರೆ.

ಅನುಭವ ಮುಕುರದ ಪೂರ್ಣ ರೂಪ ಮೋಹಾನುಭವ ಮುಕುರ ಎಂದು. ಸ್ಮರತಂತ್ರ ಎಂಬುದು ಈ ಕಿರು ಹೊತ್ತಿಗೆಯ ಇನ್ನೊಂದು ಹೆಸರು. ಇದು ಕಾಮಶಾಸ್ತ್ರವನ್ನು ಕುರಿತದ್ದೆನ್ನಲಾಗಿದೆ. ಆದರೆ ಸ್ತ್ರೀ ಪುರುಷರ ಅಂಗಾಂಗಗಳ ಸೊಬಗು ಸಂಭೋಗ ಸುಖದ ಭಾವ ಭಂಗಿಗಳ ವರ್ಣನೆ ಮುಂತಾದ್ದು ಇಲ್ಲಿಲ್ಲ. ರತಿ ವಿಜ್ಞಾನವನ್ನು ಇದರಲ್ಲಿ ನಿರೀಕ್ಷಿಸುವವರಿಗೆ ನಿರಾಶೆಯಾಗುತ್ತದೆ. ಬದಲಿಗೆ ಇದೊಂದು 'ದಾಂಪತ್ಯ ದೀಪಿಕೆಯಾಗಿದೆ' ಸ್ತ್ರೀಯೊಬ್ಬಳನ್ನು ಸಂಬೋಧಿಸಿ, ಗಂಡಿನ ಬದುಕಿನಲ್ಲಿ ಸ್ತ್ರೀಯ ಪಾತ್ರ, ಜೀವನದ ಆನಂದಾನುಭವಕ್ಕೆ ಅವಳ ಅನಿವಾರ್ಯತೆ, ಅವಳ ಸ್ಥಾನಮಾನ ಮಹತ್ವ ಮುಂತಾದವುಗಳನ್ನು ವರ್ಣಿಸಲಾಗಿದೆ. ಸ್ತ್ರೀ ಸಂಬಂಧಿಯಾದ ಅರ್ಥಪೂರ್ಣ ಸೂಕ್ತಿಗಳನ್ನು ಜನ್ನ ಸೃಷ್ಟಿಸಿದ್ದಾನೆ. ಛಂದಸ್ಸಿನ ದೃಷ್ಟಿಯಿಂದ ಇದು ಕುತೂಹಲಕಾರಿಯಾಗಿದ್ದು ಕವಿಯ ಪ್ರಯೋಗಶೀಲತೆಯನ್ನು ದರ್ಶಿಸುತ್ತದೆ.

ಜನ್ನನ ಜನಪ್ರಿಯತೆಗೆ ಮುಖ್ಯವಾಗಿ ಕಾರಣವಾಗಿರುವಂಥದು ಯಶೋಧರ ಚರಿತೆ. ಇದು ಗಾತ್ರದಲ್ಲಿ ಕಿರಿದಾಗಿರುವುದು (ಕೇವಲ



ಚಂದಿರನ ಬೆಳಕು ಚೆಲ್ಲುವರಿದಿದೆ ಕಡಲಿನೊಳಗೆ ನಾಡಿನ ಮೇಲೆ।
ಸಂಗಮಕೆ ಸಂಜೆ ಸೊಗಸಾದ ಸಮಯ ಇದನು ನಲ್ಲ ತಾ ಮರೆದಿಹನೆ॥
–ಎಚ್.ಎಸ್.ಶಿವಪ್ರಕಾಶ್





ನಾಲ್ಕು ಆಶ್ವಾಸ, ಗದ್ಯರಹಿತ ೩೧೦ ಪದ್ಯಗಳು ಅದರಲ್ಲಿ ೩೦೦ ಕಂದಪದ್ಯಗಳು) ಈ ಕಾವ್ಯದ ವಸ್ತುವಿನ ಗಟ್ಟಿತನ ರನ್ನನಂತೆ (ಗಧಾಯುದ್ಧವೂ ಚಿಕ್ಕ ಕೃತಿ) ಜನ್ನನನ್ನೂ ಜನತೆಯ



ಹತ್ತಿರಕ್ಕೊಯ್ದಿವೆ ಎನ್ನಬಹುದು. ಜೈನರು ಜೀವದಯಾಷ್ಟಮಿಯಂದು ಹೇಳಿಸಿ ಕೇಳುವ ಪುಣ್ಯಪ್ರದ ನೋಂಪಿಯ ಕತೆಗಳಲ್ಲೊಂದಾದ ಯಶೋಧರನ ಕತೆ ಇಲ್ಲಿ ಕಾವ್ಯರೂಪದಲ್ಲಿ ನಿರೂಪಿತವಾಗಿದೆ. ಅಹಿಂಸಾ ತತ್ವ ಪ್ರಚಾರ ಇದರ ಮುಖ್ಯ ಆಶಯ. ಆನುಷಂಗಿಕವಾಗಿ ಮಾನವನ ಪ್ರಬಲ ಪ್ರವೃತ್ತಿಯಾದ ಕಾಮದ ಅದಮ್ಯತೆಯನ್ನೂ ಅದಕ್ಕೆ ವಿಧಿಯ ನೆರವು ದೊರೆತರೆ ಆಗಬಹುದಾದ ಅನಾಹುತಗಳನ್ನೂ ನೇರವಾಗಿ ತ್ವರಿತವಾಗಿ ಬಿತ್ತರಿಸಿರುವುದು ಕಾವ್ಯದ ಯಶಸ್ಸಿಗೆ ಕಾರಣವಾಗಿದೆ. ಬಸವ ಯುಗದ ಕೊನೆಗಾಲದಲ್ಲಿ ಬರೆದ ಜನ್ನನಿಗೆ ಶೈವಧರ್ಮ ಪ್ರಭಾವದ ಪ್ರವಾಹದಲ್ಲಿ ಜಿನಸಮಯ ಕೊಚ್ಚಿ ಹೋಗದಂತೆ ಉಳಿಸಿಕೊಳ್ಳಬೇಕಾದ ಅಗತ್ಯವಿತ್ತು. ಆದ್ದರಿಂದಾಗಿ ತನಗಿಂತ ಮೊದಲಿನ ಜೈನಕವಿಗಳಾದ ನಾಗಚಂದ್ರ ನಯಸೇನ ಬ್ರಹ್ಮಶಿವರಂತೆ ಈತನೂ ಕಾವ್ಯದ ಮಾರ್ಗನಿಷ್ಠ ಕಠಿಣ ಚಂಪೂರೂಪವನ್ನು ಸರಳಗೊಳಿಸಿ ದೇಸಿಯ ಒಲವು ತೋರಿ ಕಾವ್ಯವನ್ನು ಜನಮನಂಬುಗಿಸಿ ತನ್ನ ಧರ್ಮ ನಿಲ್ಲುವಂತೆ ಮಾಡಲೆತ್ನಿಸಿದ್ದಾನೆ. ಯಶೋಧರ ಚರಿತೆಯ ಒಳ ಹೊರ ಸ್ವರೂಪಗಳ ಈ ಆಕಾಂಕ್ಷೆಯಿಂದ ನಿಯಂತ್ರಿತವಾಗಿವೆ ಎನಿಸುತ್ತದೆ.

ಸಕಲ ಸೌಭಾಗ್ಯಗಳಿಗೂ ಭಾಜನಳಾಗಿದ್ದ ರಾಣಿ ಅಮೃತಮತಿ ಸುಂದರ ಪುರುಷನಾದ ಯಶೋಧರನನ್ನು ವಂಚಿಸಿ ಕುರೂಪಿಯಾದ ಆನೆಯ ಮಾವುತ ಅಷ್ಟಾವಂಕನನ್ನು ಮೋಹಿಸಿ ಅವನೊಂದಿಗೆ ಕದ್ದು ಕೇಳಿಯಲ್ಲಿ ತೊಡಗುವುದು, ಇದು ದೊರೆಗೆ ತಿಳಿಯಿತೆಂದು ಗೊತ್ತಾದಾಗ ಆತನನ್ನು ಔತಣಕ್ಕೆ ಆಹ್ವಾನಿಸಿ ಅತ್ತೆ ಚಂದ್ರಮತಿಯೊಂದಿಗೆ ವಿಷವಿಕ್ಕಿ ಕೊಲ್ಲುವುದು, ಕೊನೆಯ ತನಕ ಬದಿಗನಿಗೆ ನಿಷ್ಠಳಾಗಿದ್ದು ಸರ್ವರೋಗಗಳಿಂದ ಕೂಡಿದ ಹೇಯ ಅಸಹ್ಯ ಬದುಕನ್ನು ಬಾಳಿ ಸತ್ತು ನರಕ ಸೇರುವುದು ಇಲ್ಲಿನ ಹೃದಯ ವಿದ್ರಾವಕ ಕಥೆಯ ಹೂರಣ. ರಾಜ ಯಶೋಧರ ಆತನ ಮಾತೆ ಚಂದ್ರಮತಿ ಸಾಂಕೇತಿಕವಾಗಿ ಹಿಂಸೆ ಮಾಡಿದ ಮಾತ್ರದಿಂದಲೇ ದುರ್ಮರಣಹೊಂದಿ ಹಲವು ಪ್ರಾಣಪಕ್ಷಿ ಜನ್ಮಗಳನ್ನು ಹಾಯ್ದು ಬಂದು ಅಭಯರುಚಿ ಅಭಯಮತಿಗಳಾಗಿ ಹುಟ್ಟಿ ಹಿಂಸಾ ಪ್ರವೃತ್ತಿಯ ಮಾರಿದತ್ತನಿಗೆ ತಮ್ಮ ಕಥೆ ಹೇಳಿ ಅವನನ್ನು ಪರಿವರ್ತಿಸುವುದು ಇದರ ಹೊರ ಆವರಣ. ಈ ಕಥಾನಕವನ್ನು ಸಂಸ್ಕೃತ ಪ್ರಾಕೃತದ ಹಲವು ಕವಿಗಳು ಬಳಸಿದ್ದು ಸಂಸ್ಕೃತದಲ್ಲಿ ವಾದಿರಾಜ ಬರೆದ ಇದೇ ಹೆಸರಿನ ಕಾವ್ಯವನ್ನು ಜನ್ನ ಅವಲಂಬಿಸಿದ್ದಾನೆ.

ಜನ್ನನ ಕಾವ್ಯ ರಚನಾ ಕೌಶಲದ ಪರಿಚಯಕ್ಕಾಗಿ ದೇಸೀ ಸೊಬಗಿನ ಸರಳ ಸುಂದರವಾದ ಕೆಳಗಿನ ಕಂದ ಪದ್ಯವನ್ನು ನೋಡಬಹುದು.

**ಕರಿದಾದೊಡೆ ಕತ್ತುರಿಯಂ**
**ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ**
**ಸ್ಮರಚಾಪಮನಿಳಿಕಯ್ವರೆ**
**ಮರುಳೇ ಪೊಲ್ಲಮೆಯೆ ಲೇಸು ನಲ್ಲರಮೆಯ್ಯೊಳ್**
**– ಯಶೋಧರ ಚರಿತೆ (೪೨)**

ಕಪ್ಪಗಿದೆ ಎಂದು ಕಸ್ತೂರಿಯನ್ನೂ, ಡೊಂಕಾಗಿದೆ ಎಂದು ಗಂಧದ ಕೊರಡನ್ನೂ ಕೊಂಕಾಗಿದೆ ಎಂದು ಕಾಮನಬಿಲ್ಲನ್ನೂ ಕೀಳಾಗಿ ಕಾಣಲಾದೀತೆ? ಹುಚ್ಚಿ ! ಪ್ರಿಯಕರನ ಮೈಯ್ಯ ಕೆಡುಕೇ ಒಳಿತು. (ಕುರೂಪವೇ ಸೌಂದರ್ಯ)

ಬಹುತೇಕ ಅನುವಾದಿಸಿದ್ದಾನೆ. ಆದರೂ ಕನ್ನಡದ ಜಾಯಮಾನಕ್ಕೆ ತಕ್ಕಂತೆ ಅಲ್ಲಲ್ಲಿ ಸ್ವಂತ ನುಡಿಗಟ್ಟುಗಳನ್ನು ಸೇರಿಸಿ ಸ್ವೋಪಜ್ಞತೆಯನ್ನು ತೋರಿ ವಾದಿರಾಜನನ್ನು ಮರೆಸಿ ಕನ್ನಡ ಕಾವ್ಯವನ್ನು ಮೆರೆಸಿದ್ದಾನೆ. ಹೀಗಾಗಿ ಯಶೋಧರ ಚರಿತೆ ಹಳೆಕನ್ನಡದ ಅತ್ಯಂತ ಪ್ರಸಿದ್ಧ ಜನಪ್ರಿಯ ಕಾವ್ಯಗಳಲ್ಲೊಂದಾಗಿದೆ.

ಹಿಂದಣ ಜೈನ ಕವಿಗಳಂತೆ ಧಾರ್ಮಿಕ ಲೌಕಿಕ ಎಂಬ ಎರಡು ವಿಭಾಗಗಳಲ್ಲಿ ಜನ್ನ ಕಾವ್ಯ ರಚಿಸಲಿಲ್ಲ. ಆದರೂ ಅವನ ಕೊನೆಯ ಕೃತಿ ಅನಂತನಾಥ ಪುರಾಣ ಪೂರ್ಣ ಪ್ರಮಾಣದ ಧಾರ್ಮಿಕ ಚಂಪೂ ಕಾವ್ಯ. ಯಶೋಧರ ಚರಿತೆಯಲ್ಲಿ ಧಾರ್ಮಿಕ ಕಥೆಯನ್ನೇ ಲೌಕಿಕದ ನೆಲೆಯಲ್ಲಿ ಭಿನ್ನ ಬಗೆಯಲ್ಲಿ ನಿರೂಪಿಸಿದ್ದಾನೆ. ಅನಂತನಾಥಪುರಾಣದಲ್ಲಿ ಸಾಂಪ್ರದಾಯಿಕತೆಗೆ ತಲೆಬಾಗಿದ್ದಾನೆ. ಭಾಷೆ ಬಂಧಗಳಲ್ಲಿ ಪ್ರೌಢತೆಯನ್ನು ಮೆರೆದು ಮಾರ್ಗನಿಷ್ಠನಾಗಿದ್ದಾನೆ. ಅಷ್ಟಾದಶ ವರ್ಣನೆಗಳನ್ನು ಮಾಡಿ ಮಹಾಕವಿ ಎನಿಸಿಕೊಳ್ಳಲು ಹವಣಿಸಿದ್ದಾನೆ. ಹದಿನಾಲ್ಕನೇ ತೀರ್ಥಂಕರನ ಈ ಕಥೆಯಲ್ಲಿ ಬಲದೇವ ವಾಸುದೇವರ ಕಥೆಗಳೂ ಸೇರಿಕೊಂಡಿವೆ. ಗುಣಭದ್ರಾಚಾರ್ಯ, ಚಾವುಂಡರಾಯರ ಪುರಾಣ ಕೃತಿಗಳು ಇವಕ್ಕೆ ಆಕರಗಳಾಗಿವೆ. ಅಲ್ಲಿದ್ದ ಚಿಕ್ಕ ಕಥೆಯನ್ನು ಹದಿನಾಲ್ಕು ಆಶ್ವಾಸಗಳಷ್ಟು ದೀರ್ಘವಾಗಿ ಹೀಚಿ ಜಾಳುಗೊಳಿಸಿದ್ದಾನೆ. ಪಂಚಕಲ್ಯಾಣ, ದೀಕ್ಷೆ, ಸಂನ್ಯಾಸ, ಮೋಕ್ಷ ಮುಂತಾದ ಧಾರ್ಮಿಕ ವಿಧಿವಿಧಾನಗಳ ಯಾಂತ್ರಿಕ ವರ್ಣನೆಗಳಂತೂ ಇದ್ದೇ ಇವೆ. ಕಾಮಶಾಸ್ತ್ರವೆನಿಸಿರುವ ಅನುಭವ ಮುಕುರದಲ್ಲಿ ಸಂಯಮ ತೋರಿದ ಕವಿ ಇಲ್ಲಿ ಅತಿಯಾಗಿ ಅನುಚಿತವಾಗಿ ಶೃಂಗಾರ ವರ್ಣನೆ ಮಾಡಿದ್ದಾನೆ. ಪಾಂಡಿತ್ಯ ಪ್ರದರ್ಶನದಲ್ಲಷ್ಟೇ ಜನ್ನನಿಗೆ ಇಲ್ಲಿ ಸಿದ್ಧಿ ದೊರೆತಿದೆ. ಧರ್ಮಕ್ಕೆ ನೆಲೆಯೊದಗಿಸುವ ಅವನ ಉದ್ದೇಶಕ್ಕೆ ಈ ಕೃತಿ ಎಷ್ಟು ಮಟ್ಟಿಗೆ ಪೂರಕವಾಗಿದೆ ಎಂದು ಹೇಳುವುದು ಕಷ್ಟ.

ಆದರೆ ಈ ಪುರಾಣ ಕೃತಿಯಲ್ಲಿ ಅಂತರ್ಗತವಾಗಿರುವ ಪುಟ್ಟ ಪ್ರಸಂಗ ಚಂಡಶಾಸನನ ಕಥೆ ಮೇಲಿನ ಮಾತುಗಳಿಗೆ ಹೊರತಾಗಿದ್ದು ಒಂದು ರಸಗಟ್ಟಿ ಎನಿಸಿಕೊಂಡಿದೆ. ಸುರಮ್ಯ ದೇಶದ ದೊರೆ ವಸುಷೇಣನ ಸುಂದರ ಸತಿ ಸುನಂದೆಯನ್ನು ಅವನ ಮಿತ್ರ ಚಂಡಶಾಸನ ಮೋಹಿಸಿ ಅಪಹರಿಸಿ ಅವಳನ್ನು ಒಲಿಸಿಕೊಳ್ಳುವ ಯತ್ನದಲ್ಲಿ ಸೋತು ಆಕೆ ಸಾಯುವಂತೆ ಮಾಡಿ ತಾನೂ ಸಾಯುವುದು ಇದರ ವಸ್ತು. ಇದು ಯಶೋಧರ ಅಮೃತಮತಿಯರ ಕಥೆಯ ದರ್ಪಣ ಬಿಂಬದಂತಿದ್ದು ಕಾಮ ವಿಕೃತಿಯ ಸ್ತ್ರೀ ಮುಖಕ್ಕೆ ಪ್ರತಿಯಾಗಿ ಪುರುಷಮುಖವನ್ನು ದರ್ಶಿಸುತ್ತದೆ. ಎರಡೂ ಧರ್ಮ ವಿರುದ್ಧ ಪ್ರಣಯ ಸಂಬಂಧವನ್ನು ನಿರಾಕರಿಸುತ್ತವೆ. ವಿಧಿವಾದವನ್ನೇ ಪ್ರತಿಪಾದಿಸುತ್ತವೆ. ಆದಾಗ್ಯೂ ವಾಸನಾ ಶಕ್ತಿಯ ಸೆಳೆತ, ಕಾಮಿಗಳ ಪ್ರೇಮನಿಷ್ಠೆಗಳನ್ನು ವಾಸ್ತವವಾಗಿ ಚಿತ್ರಿಸುತ್ತಾ ಚಿತ್ತಾಕರ್ಷಕವಾಗಿವೆ. ಇಲ್ಲಿನ ಪ್ರಣಯ ಸಮಸ್ಯೆಗಳು ಸರ್ವಕಾಲ ದೇಶಗಳಿಗೂ ಪ್ರಸ್ತುತವಾಗಿದ್ದು ಆಧುನಿಕ ವಿಮರ್ಶಕರ ಗಮನವನ್ನೂ ವಿಶೇಷವಾಗಿ ಸೆಳೆದುಕೊಂಡು ಬಹುಚರ್ಚಿತವಾಗಿವೆ. ಅಮೃತಮತಿ ಮತ್ತು ಚಂಡಶಾಸನರ ಆಖ್ಯಾನಗಳೆರಡನ್ನೂ ಪ್ರತ್ಯೇಕ ಖಂಡ ಕಾವ್ಯಗಳನ್ನಾಗಿ ಬರೆದಿದ್ದರೂ ಶ್ರೇಷ್ಠಕವಿ ಎಂಬ ಜನ್ನನ ಖ್ಯಾತಿಗೆ ಯಾವ ಕುಂದೂ ಇರುತ್ತಿರಲಿಲ್ಲವೆನಿಸುತ್ತದೆ. ಅವನ ಕೀರ್ತಿಲತೆ ಈ ಪ್ರಸಂಗಗಳನ್ನೇ ಆಧರಿಸಿ ಹಬ್ಬಿಕೊಂಡಿದೆ.◆

ಪ್ರಕಾರ : ಕಾದಂಬರಿ
ಬಹುಮಾನ ವಿಜೇತ ಕೃತಿ : ನ್ಯಾನ್ಸಿ
ಲೇಖಕರು : ಸುಶೀಲಾ ಡೋಣೂರ

# ಕುವೆಂಪು ಪುಸ್ತಕ ಬಹುಮಾನ





## ಸುಶೀಲಾ ಡೋಣೂರ

ವಿಜಾಪುರದವರಾದ ಸುಶೀಲಾ ಡೋಣೂರ ಅವರು ಕಳೆದ ಏಳು ವರ್ಷಗಳಿಂದ ಪ್ರಜಾವಾಣಿ ದಿನಪತ್ರಿಕೆಯಲ್ಲಿ ಪತ್ರಕರ್ತರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಅನೇಕ ಕಥೆಗಳು ಮಯೂರ ಮತ್ತು ಸುಧಾ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. 'ನ್ಯಾನ್ಸಿ' ಕಾದಂಬರಿಗೆ ಈ ಮೊದಲು ತ್ರಿವೇಣಿ ಪುರಸ್ಕಾರ ದೊರಕಿದೆ.




### ತೀರ್ಪುಗಾರರ ಅಭಿಮತ

## ವಿಶಿಷ್ಟವಾದ ನಿರೂಪಣೆ, ಭಾಷೆ

ನ್ಯಾನ್ಸಿ ಒಬ್ಬ ಅದ್ಭುತ ನೃತ್ಯಗಾತಿ. ನಂತರ ರೂಪದರ್ಶಿಯಾಗಿ ಪ್ರಖ್ಯಾತಳಾಗುತ್ತಾಳೆ. ಆದರೆ ಸಾಮಾನ್ಯ ವರ್ಗದ ಹೆಣ್ಣೊಬ್ಬಳು ಪ್ರಸ್ತುತ ತಳುಕು-ಬಳುಕಿನ ಕ್ಷೇತ್ರವನ್ನು ಆಳುವುದು ಸುಲಭದ ಮಾತಲ್ಲ. ಮೂಲತಃ ಆದರ್ಶವಾದಿಯಾದ ನ್ಯಾನ್ಸಿಯ ಜೀವನದ ಅನಿನಿವಾರ್ಯತೆಗಳು ಆದರ್ಶ, ನಿಷ್ಠೆಗಳು ಇಂದಿನ ಸ್ಪರ್ಧಾತ್ಮಕ ಪ್ರಪಂಚದ ಹೊಳೆಯಲ್ಲಿ ಕೊಚ್ಚಿಹೋಗುತ್ತವೆ. ಮಾಡೆಲಿಂಗ್ ಕ್ಷೇತ್ರದ ಸಮಗ್ರ ದರ್ಶನ, ಬೆಚ್ಚಿ ಬೀಳಿಸುವ ವಿವರಗಳು, 'ಸುಖ'ದ ಹುಡುಕಾಟ, ಭೋಗದ ಹಪಾಹಪಿಯನ್ನು ತೆರೆದಿಡುತ್ತದೆ. ಅಂತರಾಷ್ಟ್ರೀಯ ಮಟ್ಟದಲ್ಲಿ ಮಾಡೆಲ್ ಕ್ಷೇತ್ರದಲ್ಲಿ ಎಲ್ಲಾ ಅಡ್ಡಿ-ಆತಂಕಗಳನ್ನು ಏಕಾಂಗಿಯಾಗಿ, ದಿಟ್ಟವಾಗಿ ನ್ಯಾನ್ಸಿ ಎದುರಿಸುತ್ತಾಳೆ. ಹೋರಾಡುವುದು, ಕೌಟುಂಬಿಕ ಜವಾಬ್ದಾರಿಗಳನ್ನು ನ್ಯಾನ್ಸಿ ಸಮರ್ಥವಾಗಿ ನಿರ್ವಹಿಸುತ್ತಾಳೆ. ಈ ಕಾದಂಬರಿಯ ವಸ್ತು, ಕತೆಯ ನಿರ್ವಹಣೆ, ನಿರೂಪಣೆ, ಭಾಷೆ, ಕಾದಂಬರಿಗೆ ಬೇಕಾದ ಆಳವಾದ ಸೂಕ್ಷ್ಮ ಅಧ್ಯಯನ, ಸಮಕಾಲೀನ ವಸ್ತುವಿನ ಆಯ್ಕೆ ಮುಂತಾದವು ವಿಶಿಷ್ಟವಾಗಿವೆ.

## ಬಹುಮಾನಿತ ಕೃತಿಯಿಂದ.. ನೀನೇಕೆ ಬಂದೆ?



ಯಾರೋ ರಭಸವಾಗಿ ಗೇಟ್ ತೆಗೆದ ಸದ್ದಾಯಿತು. ಯಾರೆಂದು ನೋಡಲು ಎಡ್ವಿನಾ ಹೊರಗೆ ಬಂದಳು. ಶಶಾಂಕನನ್ನು ನೋಡಿ ಅವಳೆದೆ ಝಲ್ ಎಂದಿತು.

'ನೀನೇಕೆ ಬಂದೆ?'

'ನ್ಯಾನ್ಸಿ ಎಲ್ಲಿ?'

'ಅವಳು ಸೈಫಾನನೊಂದಿಗೆ ಶಾಪಿಂಗ್‌ಗೆ ಹೋಗಿದ್ದಾಳೆ. ನೀನೇಕೆ ಬಂದೆ? ನನ್ನ ಮಗಳ ಸುಖವನ್ನು ಮತ್ತೊಮ್ಮೆ ಕಿತ್ತುಕೊಳ್ಳಲು ಬಂದೆಯಾ? ಅವಳು ನಿನ್ನನ್ನು ಮರೆತಿದ್ದಾಳೆ. ಅವಳ ಹೆರಿಗೆ ಆದಕೂಡಲೇ ಅವರಿಬ್ಬರೂ ಮದುವೆ ಆಗುತ್ತಾರೆ. ಸೈಫಾನ್ ಏನು ಖಳನಾಯಕ ಅಲ್ಲ. ಏನೋ ಕೆಟ್ಟ ಗಳಿಗೆ. ಅವಳ ಮೇಲಿರುವ ಪ್ರೀತಿಯೇ ಅವನಿಂದ ಹಾಗೆಲ್ಲ ಮಾಡಿಸಿತು.'

'ನ್ಯಾನ್ಸಿ ಅವನನ್ನು ಒಪ್ಪಲು ಸಾಧ್ಯವೇ ಇಲ್ಲ'

'ನಿನ್ನನ್ನು ನಂಬಿಸುವುದು ನನಗೇನೂ ಮುಖ್ಯವಲ್ಲ. ಆದರೂ ಹೇಳುತ್ತೇನೆ ನೀನೂ ಈಗ ಕೋಟ್ಯಾಧಿಪತಿ. ಅವಳು ಒಪ್ಪಿದ್ದರೆ ಅವಳನ್ನು ನನಗೆ ಕೊಟ್ಟು ಮದುವೆ ಮಾಡಲುನನಗೇನೂ ಅಭ್ಯಂತರವಿರಲಿಲ್ಲ. ಆದರೆ ಅವಳಿಗೆ ತನ್ನ ಗಂಡನಾಗುವವ ತನ್ನ ಮಗುವಿಗೆ ತಂದೆಯೂ ಆಗಬೇಕಂತೆ. ಅದು ಸೈಫಾನನಿಂದ ಮಾತ್ರ ಸಾಧ್ಯ. ಅದಕ್ಕೆ ಅವನನ್ನು ಒಪ್ಪಿಕೊಂಡಳು...' ಅವಳ ಮಾತಿನ್ನೂ ಪೂರ್ಣವಾಗಿರಲಿಲ್ಲ. ಆತ ಅಷ್ಟೇ ರಭಸದ ಹೆಜ್ಜೆ ಹಾಕುತ್ತ ಹೊರ ನಡೆದ. ಎಡ್ವಿನಾ ಸೋಫಾ ಮೇಲೆ ಕುಸಿದು ಗೆಲುವಿನ ನಿಟ್ಟುಸಿರು ಬಿಟ್ಟಳು.

ತಾನೇ ತನ್ನ ಕೈಯಾರೆ ತನ್ನ ಮಗಳ ಬದುಕನ್ನು ನರಕಕ್ಕೆ ದೂಡಿದೆನೆಂಬ ಅರಿವೆ ಇರಲಿಲ್ಲ ಅವಳಿಗೆ.

ನ್ಯಾನ್ಸಿ ಮತ್ತು ಜಾನ್ಸಿ ಮಾರ್ಕೆಟಿಗೆ ಹೊರಡಲು ಆಟೋ ಹಿಡಿಯಬೇಕೆಂದಾಗ ಜೋಧಾ ಎದುರಾದಳು.

'ಹೇಗಿದ್ದಿ ನ್ಯಾನ್ಸಿ?'

'ಫೈನ್'

'ನಿನ್ನನ್ನು ನೋಡಿದರೆ ಜೀವ ಹಿಂಡಿದಂತಾಗುತ್ತಿದೆ ನ್ಯಾನ್ಸಿ ಪಾಪ ಕೊನೆಗೂ ನಿನ್ನ ಪಾಲಿಗೆ ಸೈಫಾನನ ಮಗುವೇ ಗತಿಯಾಯಿತೆ?'

'ನೀವೇನು ಮಾತನಾಡುತ್ತಿದ್ದೀರಿ?' ಜಾನ್ಸಿ ಕೋಪದಿಂದ ಕೇಳಿದಳು.

ಪ್ರಕಾಶಕರು:
**ಐಬಿಎಚ್ ಪ್ರಕಾಶನ**
೯೭, ಪ್ರಧಾನ್ ರೆಸಿಡೆನ್ಸಿ,
೨೪ನೇ ತಿರುವು,
೩ನೇ ಬ್ಲಾಕ್
ಪೂರ್ವ,ಜಯನಗರ,
ಬೆಂಗಳೂರು -೫೬೦ ೦೧೧
ದೂ.೦೮೦ ೨೨೪೫ ೦೪೬೦

ಈ ಮೈಲ್ :
ibhprakashana@gmail.com

ಬೆಲೆ : ರೂ.೧೮೦



ಕುರುಡುಗತ್ತಲ ವ್ಯೋಮವಲ್ಲವು ನಿನ್ನ ಕಾಣಲು ತವಕಿಸಿ॥
ತನ್ನ ನೀಲ ಒಡಲಿನುದ್ದಕೂ ಚಿಕ್ಕೆಗಂಗಳ ವಿರಚಿಸಿ॥

-ಎಚ್.ಎಸ್.ಶಿವಪ್ರಕಾಶ್





**ಪ್ರಕಾರ : ಅನುವಾದ**
**ಬಹುಮಾನ ವಿಜೇತ ಕೃತಿ: ಆದಿ-ಅನಾದಿ**
**ಲೇಖಕರು : ಆರ್.ಪಿ ಹೆಗಡೆ**

# ಎಸ್.ವಿ. ಪರಮೇಶ್ವರ ಭಟ್ಟ ಪುಸ್ತಕ ಬಹುಮಾನ





## ಆರ್. ಪಿ. ಹೆಗಡೆ




ರಾಮಚಂದ್ರ ಪರಮೇಶ್ವರ ಹೆಗಡೆ ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲ್ಲೂಕಿನಂತಹ ಗ್ರಾಮಾಂತರ ಪ್ರದೇಶದಲ್ಲಿದ್ದು ಬಹುಮುಖಿ ಆಸಕ್ತಿಗಳನ್ನು ಬೆಳೆಸಿಕೊಂಡವರಾಗಿದ್ದಾರೆ. ಜಾನಪದ, ಸಂಸ್ಕೃತಿ, ಇತಿಹಾಸ, ಭಾಷಾಶಾಸ್ತ್ರ, ಶಾಸನಶಾಸ್ತ್ರ, ಸ್ಥಳನಾಮಶಾಸ್ತ್ರ, ಸಾಹಿತ್ಯ, ಅನುವಾದ ಹೀಗೆ ಅವರ ಪ್ರತಿಭೆ ಹತ್ತು ಹಲವು ಕ್ಷೇತ್ರಗಳಲ್ಲಿ ಹರಡಿವೆ. ಕನ್ನಡದಲ್ಲಿ ಸ್ವತಂತ್ರವಾಗಿ ಹದಿನೈದು ಕೃತಿಗಳನ್ನು ರಚಿಸಿರುವ ಆರ್ ಪಿ.ಹೆಗಡೆಯವರು ೫೫ ಕೃತಿಗಳನ್ನು ಹಿಂದಿಯಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ. ಬಿ. ಎಚ್.ಶ್ರೀಧರ ಸಾಹಿತ್ಯ ಪುರಸ್ಕಾರವೂ ಸೇರಿದಂತೆ ಅನೇಕ ಪ್ರಶಸ್ತಿ ಪುರಸ್ಕಾರಗಳು ಹೆಗಡೆ ಅವರಿಗೆ ಸಂದಿವೆ.

## ತೀರ್ಪುಗಾರರ ಅಭಿಮತ:

### ಮೂಲದ ಅನುಭವ ಕೊಡುವ ಅನುವಾದ

ಅನುವಾದ ಮಾಡಿದ ಕತೆಗಳು ನೈಜವಾಗಿ ಮೂಡಿ ಬಂದಿವೆ. ಕನ್ನಡದ ಜಾಯಮಾನಕ್ಕೆ ಹೊಂದಿಕೊಳ್ಳುವಂತಹ ಭಾಷೆ ಬಳಸಿದ್ದಾರೆ. ಮೂಲ ಕತೆಗಳಲ್ಲೇ ದಟ್ಟ ಅನುಭವ, ಜೀವನದ ಜಂಜಾಟದ ವಿವಿಧ ಮುಖಗಳ ಪರಿಶೀಲನೆಯಿರುವುದರಿಂದ ಭಾಷಾಂತರದಲ್ಲಿಯೂ ಅವೆಲ್ಲ ಮೂಡಿವೆ. ಬಳಸಿರುವ ಕನ್ನಡ ಉತ್ತಮವಾಗಿದ್ದು ಓದುಗನಿಗೆ ಮೂಲದ ಅನುಭವ ಕೊಡುವಲ್ಲಿ ಯಶಸ್ವಿಯಾಗಿದೆ. ಮೂಲ ಕನ್ನಡದ ಕತೆಗಳೇನೋ ಎನ್ನುವಂತೆ ಇವನ್ನು ಅನುವಾದಿಸಲಾಗಿದೆ. ಅನುವಾದಕರ ವಿಶೇಷ ಕನ್ನಡ ಓದು, ಭಾಷಾ ಪ್ರೌಢಿಮೆ, ಪದಗಳ ಬಳಕೆ, ವಾಕ್ಯ ರಚನೆ ಈ ಬರವಣಿಗೆಯನ್ನು ಓದುಗನ ಹತ್ತಿರಕ್ಕೆ ತರುವಲ್ಲಿ ಗೆದ್ದಿದೆ.

**ಬಹುಮಾನಿತ ಕೃತಿಯಿಂದ...**

# ತುಟಿಗಳು ಅಲುಗಾಡುತ್ತವೆ. ದನಿ ಹೊರಡುವುದಿಲ್ಲ

ಎರಡೂ ಕೈಗಳಿಂದ ಪತ್ರಿಕೆಗಳ ರಾಶಿಯನ್ನು ಅವುಚಿಕೊಂಡು, ಬಲಭುಜದ ಒತ್ತಡದಿಂದ ತಣ್ಣಗಿನ ಗಾಡಿಯ ಡಬ್ಬಾದ ಬಾಗಿಲನ್ನು ನಿಧಾನವಾಗಿ ತಳ್ಳಿದ ಮತ್ತು ಎಚ್ಚರಿಕೆಯಿಂದ ಹೋಳು ಮೈಯಲ್ಲಿ ಡಬ್ಬಿಯನ್ನು ಪ್ರವೇಶಿಸಿದ. ವೈಶಾಖದ ಕಾವಿನಿಂದ ಬೆವರಿದ ದೇಹಕ್ಕೆ ಇದ್ದಕ್ಕಿದ್ದಂತೆ ಪರಿಮಳಭರಿತವಾದ ಶೀತಲತೆಯ ಸೋಂಕು ಶ್ರಾವಣದ ತುಂತುರು ಹನಿಯ ಹಾಗೆ ಆಹ್ಲಾದಿತಗೊಳಿಸಿತು. ಬಾಗಿಲಿನಿಂದ ಸರಿದು ಅವನು ಒಂದು ಸೀಟಿಗೆ ಒರಗಿ ನಿಂತುಕೊಂಡು ದೇಹವನ್ನು ಸಡಿಲ ಬಿಟ್ಟ. ಡಬ್ಬಿಯಲ್ಲಿ ಮೊಳಗುತ್ತಿದ್ದ ಸೀತಾರ್‌ನ ಮಂದದ ಧ್ವನಿ ಅವನ ರೋಮರೋಮಗಳಲ್ಲಿ ನರ್ತಿಸತೊಡಗಿತು. ಇದ್ದಕ್ಕಿದ್ದ ಹಾಗೆ ಹಳೆಯ ಕಿವಿ ಕತ್ತರಿಸಿ ಕಾಫಿಯ ಬಾಂಸುರಿಯ ಮಧುರ ಕಾಕು ಕಿವಿಯಲ್ಲಿ ಬಿತ್ತು!ದಾದಾ ರೆ ದಾದಾ! ಇದೇನು ಗಾಡಿಯ ಡಬ್ಬಿಯೋ, ಸ್ವರ್ಗಲೋಕವೋ?

ಈಗಷ್ಟೆ ಒಂದೆರೆಡು ಸೀಟುಗಳಷ್ಟೇ ತುಂಬಿದ್ದವು. ಸದ್ದಿಲ್ಲದೆ ಸವಾರಿಗಳು ಬರುತ್ತಿದ್ದವು. ಸದ್ದಿಲ್ಲದೆ ಆತಂಕವಿಲ್ಲದೆ, ಬಾಗಿ ಬಾಗಿ ಮುಂದೆ ಸರಿಯುತ್ತಿದ್ದ ಅವರ ದೃಷ್ಟಿ ಸೀಟುಗಳ ಬೆನ್ನ ಮೇಲೆ ತಮ್ಮ ಸೀಟುಗಳ ನಂಬರನ್ನು ಹುಡುಕುತ್ತ ಮತ್ತು ಕುಳಿತುಕೊಳ್ಳುವ ಮುನ್ನ ತುಸು ತುದಿಗಾಲ ಮೇಲೆ ನಿಂತು, ಸಾಮಾನು ಸರಂಜಾಮುಗಳನ್ನು ಯಾರ ಬಳಿಯೂ ಮಾತನಾಡದೇ ನೋಡದೆ ತಮ್ಮ ಸ್ಥಾನದಲ್ಲಿ ಇಡುತ್ತಿದ್ದರು. ಬೇರೆ ಗಾಡಿಗಳಿಗಿಂತ ಈ ತಣ್ಣಗಿನ ಗಾಡಿಯ ಪ್ರವಾಸಿಗರು ಯಾವುದೋ ಬೇರೆ ಲೋಕದ ಮನುಷ್ಯರಂತೆಯೆ ಕಾಣುತ್ತಿದ್ದರು. ಶಾಂತ, ಸೌಮ್ಯ, ಸ್ವಚ್ಛ, ಶುಭ್ರ ಮಾತನಾಡುವುದಾದರೆ ಕೇವಲ ತುಟಿಗಳು ಅಲುಗಾಡುತ್ತವೆ. ದನಿ ಹೊರಡುವುದಿಲ್ಲ. ಈ ತಣ್ಣಗಿನ ಗಾಡಿಯ ನಿರೀಕ್ಷೆ ಇರುತ್ತದೆ ಅವನಿಗೆ. ವಿರಕ್ತ ಮನಸ್ಸಿನಿಂದ ಅವನು ಅನ್ಯಗಾಡಿಗಳಲ್ಲಿ ಪ್ರತಿಯೊಂದು ಡಬ್ಬಾದಲ್ಲಿ ತಿರುಗಾಡುತ್ತಾನೆ. ಮತ್ತು ಮನಸ್ಸಿನಲ್ಲಿಯೇ ಅಸಹ್ಯ ಪಟ್ಟುಕೊಳ್ಳುತ್ತಾ, ಕುದಿಯುತ್ತಿರುತ್ತಾನೆ.

**ಪ್ರಕಾಶಕರು: ಹೇಮಂತ ಸಾಹಿತ್ಯ, # ೯೭೨ ಸಿ, ೪ನೇ ಇ ಬ್ಲಾಕ್, ೧೦ ನೇ 'ಎ' ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು – ೫೬೦ ೦೧೦, ಮೊ.೯೩೪೧೧೫೪೮೯೦೬, ಬೆಲೆ : ರೂ.೮೦**

ಪ್ರಕಾರ : ಮಹಿಳಾ ಲೇಖಕರು
ಬಹುಮಾನ ವಿಜೇತ ಕೃತಿ :
ಸಾಸಿವೆ ತಂದವಳು
ಲೇಖಕರು : ಭಾರತಿ ಬಿ.ವಿ

# ಎಂ.ಕೆ. ಇಂದಿರ ಪುಸ್ತಕ ಬಹುಮಾನ



## ಭಾರತಿ ಬಿ.ವಿ

ಬಿ.ಕಾಂ ಪದವಿ ಪಡೆದು ಹನ್ನೆರಡು ವರ್ಷಗಳ ಕಾಲ ಬೆಂಗಳೂರಿನಲ್ಲಿ ಉದ್ಯೋಗ ಮಾಡಿದ ಭಾರತಿ ಬಿ.ವಿ ಅವರ ಪ್ರೀತಿಯ ಹವ್ಯಾಸ ಸಾಹಿತ್ಯರಚನೆ. ಇದರೊಂದಿಗೆ ಹೊಸ ಊರು ಹಾಗು ದೇಶಗಳನ್ನುಗಳನ್ನು ಸುತ್ತುವುದು ಭಾರತಿ ಅವರ ಆಸಕ್ತಿಯ ಹವ್ಯಾಸಗಳು.




### ತೀರ್ಪುಗಾರರ ಅಭಿಮತ

## ಜೀವನ ಪ್ರೀತಿಯ ಹೊಸ ಅರಿವು

ಈ ಕೃತಿ ತನ್ನ ವಸ್ತು, ಭಾಷೆ, ನಿರೂಪಣಾ ಶೈಲಿಗಳಿಂದ ಕನ್ನಡ ಸಾಹಿತ್ಯದ ವಿಶಿಷ್ಟ ಪ್ರಯೋಗವೆಂಬಂತೆ ಮೂಡಿ ಬಂದಿವೆ. ಆಕರ್ಷಕ ಹೆಸರು, ವಿನ್ಯಾಸಗಳಿಂದ ಓದುಗರನ್ನು ಒಂದು ಕ್ಷಣ ತಡೆದು ನಿಲ್ಲಿಸಿ ಸಹೃದಯರ ಮನಸ್ಸನ್ನು ತಟ್ಟುವ ಮುಟ್ಟುವ ಶಕ್ತಿ ಈ ಕೃತಿಗಿದೆ. ಕ್ಯಾನ್ಸರ್ ರೋಗಿಯೊಬ್ಬಳ ಅನುಭವಗಾಥೆ ಎಂಬ ಸೀಮಿತ ಚೌಕಟ್ಟಿನಲ್ಲಿ ಈ ಕೃತಿಯನ್ನು ನೋಡುವುದಕ್ಕಿಂತಲೂ ಅದರಾಚೆಯ ಶ್ರೇಷ್ಠ ಸೃಜನಶೀಲ ಅಭಿವ್ಯಕ್ತಿಯಾಗಿ ಕೃತಿಯನ್ನು ನೋಡುವುದರಲ್ಲಿ ಹೆಚ್ಚು ಮೌಲ್ಯವಿದೆ. ಸಾಹಿತ್ಯದ ವಿವಿಧ ಆಯಾಮಕ್ಕೆ ವಿಸ್ತರಿಸಿಕೊಂಡು ಕಥನ ಶೈಲಿಯ ಉತ್ತಮ ನಿರೂಪಣೆಯ ಮೂಲಕ ಕೃತಿಯು ನೀಡುವ ಅನುಭವ ವಿಶೇಷವಾದುದು. ಲೇಖಕಿ ದೇಹದಲ್ಲಿ ಕ್ಯಾನ್ಸರ್ ಮಾತ್ರ ಅಲ್ಲ. ಅವರೊಳಗೊಬ್ಬ ಪ್ರತಿಭಾವಂತ ಲೇಖಕಿಯೂ ಇದ್ದಾಳೆ ಎಂಬ ಅರಿವು ಓದುಗರಿಗಾಗುತ್ತದೆ. ಬದುಕಿನ ನಿಗೂಢತೆಯನ್ನು ಬೆರಗು ವಿಸ್ಮಯಗಳಿಂದ ನೋಡದೆ ತೀರಾ ಆಪ್ತವಾಗಿ ಹಾಸ್ಯ ಮಿಶ್ರಿತ ಶೈಲಿಯಲ್ಲಿ ನಿರೂಪಿಸುವ ಲೇಖಕಿ ಜೀವನ ದೃಷ್ಟಿ ಬದುಕನ್ನು ಪ್ರೀತಿಸುವವರಿಗೂ, ಬದುಕನ್ನು ಎದುರಿಸುವವರಿಗೂ, ಬದುಕನ್ನು ನಿರಾಕರಿಸುವವರಿಗೂ ಏಕಕಾಲದಲ್ಲಿ ಜೀವನ ಪ್ರೀತಿಯ ಹೊಸ ಅರಿವು ನೀಡುತ್ತದೆ.

### ಬಹುಮಾನಿತ ಕೃತಿಯಿಂದ...

## ಅಬ್ಬಾ! ಎಂಥ ಕೆಟ್ಟ ಕನಸು!!



ನಾನು ಒಂದು ವೀಲ್ ಛೇರ್‌ನ ಮೇಲೆ ಕೂತಿದ್ದೆ. ಆಯಾ ಒಬ್ಬಳು ವೀಲ್ ಛೇರನ್ನು ಆ ಆಪರೇಷನ್ ಥಿಯೇಟರ್ ಒಳಗೆ ತಳ್ಳಿ ಮಾಯವಾದಳು. ಕೂತಲ್ಲೇ ಕಣ್ಣಾಡಿಸಿದೆ. ಆ ಆಪರೇಷನ್ ಥಿಯೇಟರ್ ತುಂಬ ವಿಶಾಲವಾಗಿತ್ತು. ರೂಮಿನ ತುಂಬಾ ಎಲ್ಲಿ ನೋಡಿದರೂ ಬರೀ ಯಂತ್ರಗಳು, ಉಪಕರಣಗಳು, ಜೋತಾಡುತ್ತಿದ್ದ ವೈರ್‌ಗಳು. ಇದ್ದಕ್ಕಿದ್ದಂತೆ ಒಬ್ಬರು ನರ್ಸ್, ಜೊತೆಗೊಬ್ಬರು ಡಾಕ್ಟರ್ ಎಲ್ಲಿಂದಲೋ ಪ್ರತ್ಯಕ್ಷವಾದರು. ನನ್ನನ್ನು ವೀಲ್ ಛೇರ್‌ನಿಂದ ಎದ್ದು ಆಪರೇಷನ್ ಟೇಬಲ್ ಮೇಲೆ ಬಂದು ಮಲಗುವಂತೆ ಹೇಳಿದರು. ಹೋಗಿ ಮಲಗಿದೆ ಅವರಿಬ್ಬರೂ ಏನೇನೋ ತಯಾರಿ ನಡೆಸುತ್ತಿದ್ದರು. ನಾನು ಪಿಳಿಪಿಳಿ ಕಣ್ಣು ಬಿಟ್ಟು ಮಲಗಿದ್ದೆ. ಎದೆ ಡವಗುಟ್ಟುತ್ತಿತ್ತು. 'ಜನರಲ್ ಅನಸ್ತೇಷಿಯಾ ಕೊಡ್ತಿರೋ ಅಥವಾ ಲೋಕಲ್ಲೋ' ಅಂದೆ. ನಿಮ್ಮ ಕ್ಯಾನ್ಸರ್ ನೋಡ್ಸ್‌ಗೆ ಕೂಡಾ ಹರಡಿರುವುದರಿಂದ ಲೋಕಲ್ ಆಗೋದಿಲ್ಲ ಜನರಲ್ಲೇ ಕೊಡಬೇಕು ಅಂದರು ನೋಡ್ಸ್‌ಗೆ ಹರಡಿದೆ! ಗಾಬರಿಯಿಂದ ನಾಲಿಗೆಯಲ್ಲಿನ ತೇವ ಆರಿತು. 'ನೋಡ್ಸ್‌ಗೆ ಕೂಡಾ ಹರಡಿದೆಯಾ? ಮತ್ತೆ ಅವತ್ತು ಡಾಕ್ಟರ್ ನೋಡ್ಸ್‌ಗೆ ಹರಡಿಲ್ಲ ಅಂದಿದ್ದರಲ್ಲ..' ನನ್ನ ಧ್ವನಿ ನನಗೇ ಕೇಳಿಸದಷ್ಟು ಕ್ಷೀಣವಾಗಿತ್ತು. 'ಮೊದಲಲ್ಲಿ ಹರಡಿಲ್ಲ ಅಂದುಕೊಂಡಿದ್ದೆವು. ಆದರ ಅವುಗಳಿಗೆ ಕೂಡಾ ಹರಡಿಯಾಗಿದೆ ಅಂತ ಅನುಮಾನ ಬಂದಿದ್ದರಿಂದ, ಯಾವುದೇ ರಿಸ್ಕ್ ತೆಗೆದುಕೊಳ್ಳಬಾರದು ಅಂತ ಅದನ್ನು ತೆಗೆದುಹಾಕಿಬಿಡೋಣ ಅಂತ ತೀರ್ಮಾನಿಸಿದೆವು. ಅಷ್ಟೆ..' ಅಷ್ಟು ಹೇಳುವಷ್ಟರಲ್ಲಿ ನಾನು ನಿದ್ದೆಗೆ ಜಾರಿದ್ದೆ..

ಮಲಗಿದ್ದವಳು ಧಡಕ್ಕಂತ ಕಣ್ಣು ಬಿಟ್ಟೆ. ಒಂದು ವಿಚಿತ್ರವಾದ ಮಂಪರಿನ ನಿದ್ರೆಯದು. 'ಅಬ್ಬಾ! ಎಂಥ ಕೆಟ್ಟ ಕನಸು ದರಿದ್ರದ್ದು !! ಕ್ಯಾನ್ಸರ್ ಅಂತೆ, ಯಾವುದೋ ಆಪರೇಷನ್ ಥಿಯೇಟರ್ ಅಂತೆ .. ಯಾಕೆ ಹೀಗೆಲ್ಲ ಕನಸು?' ಅಂತ ಮೈ ನಡುಗಿತು.

ಪ್ರಕಾಶಕರು: ಅಹರ್ನಿಶಿ ಪ್ರಕಾಶನ, ಜ್ಞಾನವಿಹಾರ ಎಕ್ಸ್‌ಟೆನ್ಷನ್, ಕಂಟ್ರಿ ಕ್ಲಬ್ ಮುಂಭಾಗ, ವಿದ್ಯಾನಗರ,
ಶಿವಮೊಗ್ಗ- ೫೭೭ ೨೦೨, ಮೊ.: ೯೪೪೯೧೭೮೮೨, ಈ ಮೈಲ್ : akshatha.shimoga@gmail.com, ಬೆಲೆ : ರೂ.೧೧೦



ವಸಂತ ಕಾಲವ ಬಡಿದೋಡಿಸುತ ಬಂತು ಬಂತುಬಿರು ಬೇಸಗೆಯ।
ನಿನ್ನ ಹೂಗಳು ಉದುರಿಹೋದವು ಎಲ್ಲಿ ಹೇಳು ಆ ಮುಗುಳ್ನಗೆಯ॥
-ಎಚ್.ಎಸ್.ಶಿವಪ್ರಕಾಶ್





ಪ್ರಕಾರ : ಮುಸ್ಲಿಮ್ ಬರಹಗಾರರು
ಬಹುಮಾನ ವಿಜೇತ ಕೃತಿ :
ನೂರ್ ಗಜ್ಹಲ್
ಲೇಖಕರು :ಅಲ್ಲಾಗಿರಿರಾಜ ಕನಕಗಿರಿ

# ಪಿ. ಲಂಕೇಶ್ ಪುಸ್ತಕ ಬಹುಮಾನ





## ಅಲ್ಲಾಗಿರಿರಾಜ್ ಕನಕಗಿರಿ




ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಕನಕಗಿರಿ ಊರಿನವರಾದ ಅಲ್ಲಾಗಿರಿರಾಜ್ ಅವರಿಗೆ ಸಮಾಜಸೇವೆ ಮತ್ತು ಸಾಹಿತ್ಯ ರಚನೆಯಲ್ಲಿ ತೀವ್ರ ಆಸಕ್ತಿ. ಪತ್ರಿಕಾ ಬರವಣಿಗೆಗಳ ಮೂಲಕ ಮತ್ತು ಬೀದಿನಾಟಕಗಳ ಮೂಲಕ ಸಮಾಜದ ಜಾಗೃತಿಗೆ ಶ್ರಮಿಸುತ್ತಿದ್ದಾರೆ. ಕಾವ್ಯಕಡಲು, ಕೊರಳಕೂಗು ಇವರ ಪ್ರಮುಖ ಕವನ ಸಂಕಲನಗಳು. ತಮ್ಮ ನೆಲದ ಘಜಲ್‌ಗಳ ಬಗ್ಗೆ ವಿಶೇಷ ಆಸಕ್ತಿ ಹೊಂದಿರುವ ಅಲ್ಲಾಗಿರಿರಾಜ್ ಅವರು ಬಹುಮಾನ ವಿಜೇತ ನೂರು ಘಜಲ್ ಕೃತಿಯೊಂದಿಗೆ ನೂರೆಂಟು ಘಜಲ್ ಎಂಬ ಕೃತಿಯನ್ನೂ ರಚಿಸಿದ್ದಾರೆ. ಡಾ. ಬಿ.ಆರ್ ಅಂಬೇಡ್ಕರ್ ರಾಷ್ಟ್ರೀಯ ಪ್ರಶಸ್ತಿ, ಹೂಗಾರ ಪ್ರಶಸ್ತಿ ಸೇರಿದಂತೆ ಹಲವು ಪ್ರಶಸ್ತಿ ಪುರಸ್ಕಾರಗಳು ಅಲ್ಲಾಗಿರಿರಾಜ ಅವರಿಗೆ ಲಭಿಸಿವೆ.

## ತೀರ್ಪುಗಾರರ ಅಭಿಮತ:

### ವಿಶಿಷ್ಟ ರಚನಾ ವಿನ್ಯಾಸ, ಭಾವ ನಿವೇದನೆ

ಕನ್ನಡದಲ್ಲಿ ಗಜಲ್ ರಚನೆಗಳು ವಿರಳವಾಗಿರುವಾಗ ಈ ಕೃತಿ ಮಹತ್ವದ್ದಾಗಿದೆ. ಅದರ ರಚನಾ ವಿನ್ಯಾಸ, ಭಾಷಾ ಬಳಕೆ, ಭಾವ ನಿವೇದನೆ, ಅನುಭವಗಳನ್ನು ಹರಳುಗಟ್ಟಿಸಿರುವಿಕೆ – ಹೀಗೆ ವಿವಿಧ ಕಾರಣಗಳಿಗಾಗಿ ಇದು ವಿಶಿಷ್ಟವೆನಿಸಿದೆ. ಹಾಗೆ ನೋಡಿದರೆ ಗಜಲ್ ಪ್ರಕಾರವೇ ತುಂಬ ವಿಶಿಷ್ಟ ರಚನೆಯಾಗಿದೆ. ಅದರಲ್ಲೂ ಪ್ರಸ್ತುತ ಲೇಖಕರು ತಮ್ಮ ಮೊದಲ ಪ್ರಯತ್ನದಲ್ಲಿಯೇ ತುಂಬ ಅಮೂಲ್ಯವಾದ ಗಜಲ್‌ಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ. ತಮ್ಮ ಗಜಲ್‌ಗಳಲ್ಲಿ ಬಳಕೆಯಾಗಿರುವ ಉರ್ದು ಶಬ್ದಗಳಿಗೂ ಅಲ್ಲಲ್ಲೇ ಅರ್ಥ ನೀಡುತ್ತಾ ಹೋಗಿದ್ದಾರೆ. ಇದು ಅವುಗಳನ್ನು ಅರ್ಥ ಮಾಡುವಲ್ಲಿ ತುಂಬ ನೆರವಾಗುತ್ತದೆ. ಗಜಲ್ ರಚನೆಕಾರರಿಗೆ ಇವರ ಕೃತಿ ಸ್ಫೂರ್ತಿಯಾಗುವಂತಿದೆ.

## ಬಹುಮಾನಿತ ಕೃತಿಯಿಂದ... ನೂರ್ ಗಜ್ಹಲ್



ಮನೆ ಒಳಗಿನ ಕನ್ನಡಿ ಹಲಬುತ್ತಿದೆ ನಿನಗಾಗಿ ;
ಎದ್ದು ಬಾ ಕಂಬಳಿ ಜಾಡಿಸಿ
ಮಬ್ಬು ಹಿಡಿದಿದೆ ಮನಸ್ಸಿಗೆ ಬಿಡಿಸು
ಬಾ ನಿನ್ನ ನೀಳ ಕೇಶ ಜಾಡಿಸಿ

ಯಾರೋ ಇಟ್ಟ ಮಾತ ಕಿಡಿಗೆ,
ನೀ ಯಾಕೆ ಕಂಬಳಿಯ ಕತ್ತಲೊಳಗೆ ಬುಸುಗುಟ್ಟುತ್ತಿರುವೆ
ನಿನ್ನ ನಗು ಬೇಡುತ್ತಿದೆ ನಸುಕ ಬೆಳಕು
ಇತ್ತ ಎದ್ದು ಬಾ ಸೆಡುವು ಜಾಡಿಸಿ

ಮುಗಿಯುದಿಲ್ಲ ಒಂದು ದಿನಕ್ಕೆ ಸಂಸಾರದ ಸಾರ;
ಇಂತಹ ಮಾತು ಸಾವಿರ ಸಾವಿರ
ನಾನು ನೀನು ಅಗಸನ ಕತ್ತೆಯಂತೆ
ಭಾರವೆಂದರ್ಥೆಗೆ ಹೇಳು ಬಾ ಮಾತಿನಲ್ಲಿ ಜಾಡಿಸಿ

ನಾಳೆ ಬರುವ ಅಜ್ಜನ ಉರುಸಿಗೆ
ಹೆಜ್ಜೆಯ ಗೆಜ್ಜೆ ಸದ್ದು ಮಾಡಬೇಕು ನಾನು ನೀನು
ಬಾಡುತ್ತಿದೆ ಮುದ್ದಾದ ಮುಖ ನೀರಿಲ್ಲದ
ಹೂವಿನಂತೆ–ಬಾ ಇತ್ತ ಮೈ ಜಾಡಿಸಿ

ನನ್ನಾಣೆ ಮತ್ತೆಂದು ಮುಟ್ಟುವುದಿಲ್ಲ ಮಧು
ಬಟ್ಟಲು ನಿನ್ನ ಉಸಿರು ಬಿಸಿ ಇರುವ ತನಕ
ನಿದ್ದೆ ಇಲ್ಲದೆ ಒದ್ದಾಡಿ ಒದ್ದಾಡಿ ನಿಲಿಗೆ ಅಂಚಿಗೆ
ಬಂದಿವೆ ಹಿಡಿದು ಬಾ ನಿನ್ನೆಯ ನೆನಪಿನ ಸೆರಗ ಜಾಡಿಸಿ

ಮೂರು ಗುಂಡ ಒಲೆಯ ಮೇಲೆ ಇಟ್ಟ ನೀರ
ಗುಂಡ್ರುಕಿ ಸುಡುತ್ತಿಲ್ಲ ನಿನ್ನ ಬಳೆ ಸದ್ದಿಲ್ಲದೆ
ತುಟಿ ಒಣಗಿ ಗಂಟಲಿಗೆ ಇಳಿಯುತ್ತಿಲ್ಲ ಉಗುಳು;
ಬೇಗ ಬಾ 'ಗಿರಿರಾಜ'ನ ಫಲವತ್ತು ಜಾಡಿಸಿ

**ಪ್ರಕಾಶಕರು: ಸಮೀರ ಪ್ರಕಾಶನ, ಎ.ಪಿ.ಎಂ.ಸಿ ಎದುರುಗಡೆ, ಕನಕಗಿರಿ – ೫೮೩ ೨೮೩, ಕೊಪ್ಪಳ ಜಿಲ್ಲೆ**
**ಮೊ.೯೦೦೮೧೨೫೮೮೮/೯೪೪೮೧೭೬೬೯೩, ಈ ಮೈಲ್ : allagiriraj@gmail.com, ಬೆಲೆ : ರೂ.೮೦**

ಪ್ರಕಾರ : ಕವನ ಸಂಕಲನ
ಬಹುಮಾನ ವಿಜೇತ ಕೃತಿ :
ಪೂರ್ವಭಾಷಿ
ಲೇಖಕರು : ತಾರಿಣಿ ಶುಭದಾಯಿನಿ

# ಜಿ.ಎಸ್.ಶಿವರುದ್ರಪ್ಪ ಪುಸ್ತಕ ಬಹುಮಾನ





## ಆರ್ ತಾರಿಣಿ ಶುಭದಾಯಿನಿ

ಚಿತ್ರದುರ್ಗದ ಸರ್ಕಾರಿ ಪದವಿ ಕಾಲೇಜಿನಲ್ಲಿ ಇಂಗ್ಲಿಷ್ ಸಹಪ್ರಾಧ್ಯಾಪಕರಾಗಿರುವ ತಾರಿಣಿಯವರು ಕನ್ನಡ ಸಾಹಿತ್ಯದ ಪ್ರಮುಖ ಕವಿ ಮತ್ತು ವಿಮರ್ಶಕಿಯಾಗಿದ್ದಾರೆ. ತೋಡಿರಾಗ, ಚಿತ್ತಗ್ಲಾನಿಯ ಮಾತು, ಒಂದು ತುಂಡು ಬೆಲ್ಲ ಮತ್ತು ಪೂರ್ವಭಾಷಿ ಇವರ ಕವನ ಸಂಕಲನಗಳಾಗಿವೆ. ಹೆಡೆಯಂತಾಡುವ ಸೊಡರು, ಗಳಿಗೆ ಬಟ್ಟಲು ಮತ್ತು ಸಾಮಯಿಕ ವಿಮರ್ಶಾ ಕೃತಿಗಳಾಗಿವೆ. ನರ್ವಸಾಹತೀಕರಣ, ಸ್ತ್ರೀ ಶಿಕ್ಷಣ–ಚರಿತ್ರೆಯ ಹೆಜ್ಜೆಗಳು ವಿಚಾರ ಸಾಹಿತ್ಯದ ಕೃತಿಗಳಾಗಿವೆ. ಬೇಂದ್ರೆ ಕಾವ್ಯ ಪುರಸ್ಕಾರ, ಕಸಾಪ ದತ್ತಿನಿಧಿ ಬಹುಮಾನ, ಕಡೆಂಗೋಡ್ಲು ಶಂಕರಭಟ್ಟ ಕಾವ್ಯ ಪ್ರಶಸ್ತಿ ಸೇರಿದಂತೆ ಅನೇಕ ಪ್ರಶಸ್ತಿ ಪುರಸ್ಕಾರಗಳು ಇವರಿಗೆ ಸಂದಿವೆ.




## ತೀರ್ಪುಗಾರರ ಅಭಿಮತ

## ಅಚ್ಚರಿ, ಸಂತಸ, ಶೋಕ ಸೋಜಿಗಗಳಿಗೆ ಹೊಸ ಭಾಷೆ

'ಪೂರ್ವಭಾಷಿ'– ಕೇವಲ ನಲವತ್ತೊಂದು ಕವಿತೆಗಳಿರುವ ಕವಿಗಿಂತ ಮುನ್ನ ಕವಿತೆಗಳೇ ಮಾತನಾಡಲು ಬಯಸುವ ಪುಟ್ಟ ಪುಸ್ತಿಕೆ. ಕಾವ್ಯ ನಿರ್ಮಿತಿಗೆ ಅನಿವಾರ್ಯವಾದ ಧ್ಯಾನಶೀಲತೆಯನ್ನು ತನ್ನೊಳಗೆ ಬೆಚ್ಚಗೆ ಕಾಪಿಟ್ಟುಕೊಂಡಿದೆ. ಇದನ್ನು 'ಸ್ತ್ರೀಕಾವ್ಯ' ಎಂಬ ಫ್ರೇಮಿನೊಳಗೆ ಕೂರಿಸುವ ಅಗತ್ಯವಿಲ್ಲ. ತನ್ನ ಅನುಭವ, ಅಚ್ಚರಿ, ಸಂತಸ, ಶೋಕ ಸೋಜಿಗಗಳಿಗೆ ಹೊಸ ಭಾಷೆಯೊಂದನ್ನು ಟಂಕಿಸಿಕೊಂಡು ಕಾವ್ಯ ನಿಲ್ಲಿಸಬಲ್ಲ; ಮಾಂತ್ರಿಕಪದಗಳ ಮಧುರಸದಿಂದ ಕವಿತೆಕಟ್ಟುತ್ತಾ ಆರ್ದತೆಯಿಂದ 'ಓ ದೇವತೆಗಳೇ ಕರುಣಿಸಿ ಒಂದು ಶಿಶು ಗೀತೆಯನ್ನ' ಎಂದು ಗ್ರೀಕ್ ನಾಟಕದ ಕೋರಸ್ ದನಿಯ ಕೋರಿಕೆಯಿಡಬಲ್ಲ ಅಪೂರ್ವ ಅಭಿವ್ಯಕ್ತಿ ಈ ಕವಿಗಿದೆ! ಈ ಕವಿ ತಾನು ಅನುಭವಿಸಿರುವುದನ್ನು ಅತ್ಯಂತ ಅಧಿಕೃತವಾಗಿ, ಮನೋಜ್ಞವಾಗಿ ಕವನಗಳಲ್ಲಿ ದಾಖಲಿಸುತ್ತಾರೆ. ಇದು ಭಾವೋದ್ವೇಗದ, ಅರೆಬೆಂದ ಎಳಸಾದ ಅಭಿವ್ಯಕ್ತಿಯಲ್ಲ. ಯಾವ 'ಇಸಂ'ಗಳ ಹೇರಿಕೆ ಇಲ್ಲ. ಜನಪ್ರಿಯ ಬರಹಗಳಲ್ಲಿ ಹಾಸುಹೊಕ್ಕಾಗಿ ಕಾಣುವ ಕಾಮ ಪ್ರೇಮಗಳ ವೈಭವೀಕರಣ ಇಲ್ಲ. ಸಂಸ್ಕೃತ ಭೂಯಿಷ್ಠವಲ್ಲದ, ಜಾಳಲ್ಲದ, ಸುಲಭವಾಗಿ ಓದಿಸಿಕೊಂಡು ಹೋಗುವ ಭಾಷೆ ಇವರಿಗೆ ದಕ್ಕಿದೆ. ಪ್ರಚಾರ ಸಾಹಿತ್ಯದ ಅಬ್ಬರ, ಆರ್ಭಟ, ಘೋಷಣೆ, ಭಾವ ತೀವ್ರತೆಯ ಪರಾಕಾಷ್ಠೆಗಳಿಂದ ಹೊರಗುಳಿದು ಮಾಗಿದ ಮನಸ್ಸು ಮತ್ತು ಹೃದಯಗಳಿಂದ ಜೀವನವನ್ನು ಸಕಾರಾತ್ಮಕವಾಗಿ ನೋಡುವ ಮತ್ತು ಸ್ಪಂದಿಸುವ ತವಕ ಕಾಣುತ್ತದೆ.

## ಬಹುಮಾನಿತ ಕೃತಿಯಿಂದ...

# ರೂಪವಂತ ಹೆಣ್ಣಿನ ಭಾಷೆ

ಪಹರೆ ಹನ್ನೊಂದರ
ಗಸ್ತಿ ತಿರುಗುವ ಧೀರ
ನನ್ನಂಥ ಗಂಡನ್ನೆ ದಾಟಿ ಹೋಗುವ
ಹೆಣ್ಣೆಂಗ್ಸು ನೀನ್ಯಾರೆ?
ನಡೆ ಮನೆಗೆ ನಡೆ ಮನೆಗೆ, ಎಲೆ ಹೆಣ್ಣೆ
ಭಾಷೆಗೆ ಬಿದ್ದಿರುವ
ಮಾತಿಗೆ ಸೋತಿರುವೆ
ಕಟ್ಟು ಮುರಕೊ ಬಾ ಅಂತಾನೆ ನನ ಮಾವ
ಬಿಡುದಾರಿ ಬಿಡುದಾರಿ ಎನಗೆ
ಭಾಷೆಯೆಂಬೋದು
ತಪ್ಪೋದು ಈಗಲೇ
ಕಾರಿರುಳ ಕತ್ತಲ ಸಂಚಿನಲೆ
ದೆವ್ವ ಹೊಕ್ಕುವ ವೇಳೆ ಮೈಮನಸು ಜೋಕೆ
ನಡಿ ಮನೆಗೆ ನಡಿ ಮನೆಗೆ ಎಲೆ ಹೆಣ್ಣೆ
ದಾರಿಗೆ ಜೊತೆಯಿಲ್ಲ
ರೂಪಕೆ ಸಮನಿಲ್ಲ
ಪುತ್ಥಳಿಯಂತಿರುವ ಹೆಣ್ಣಂದ
ಕಣ್ಣಿಂದ ಕಾಣಬೇಕೆಂದವನ
ಮನಸು ಮುರಿಯಲಿ ಹೇಗೆ?
ಬಿಡುದಾರಿ ಬಿಡುದಾರಿ ಎನಗೆ
ಕಳ್ಳಕಾಕರು ಬಂದು
ಕದ್ದಾರು ನಗನಾಣ್ಯ
ಕದ್ದಾರು ನನ್ನೊಡವೆ,
ಜೋಪಾನ ಹೆಣ್ಣೆ ಮಾನಕೆ ಅಂಜು,
ಮನಸಿಜನ ಕಾಟಕೆ ಹೆದರು
ನಡಿ ಮನೆಗೆ ನಡಿ ಮನೆಗೆ ಎಲೆ ಹೆಣ್ಣೆ
ಕಳ್ಳನಿಗೊಂದೊಡವೆ
ಸುಳ್ಳನಿಗೊಂದದುವೆ
ನೆಪಹಾಕೆ ಮುರಿಯುವೆ
ನೋಡಿನ್ನು ಗಂಡಸು ಅರಿಯುವನೆ
ಹೆಣ್ಣಿನ ಸನ್ನೆ ಭಾಷೆಯ
ಬಿಡುದಾರಿ ಬಿಡುದಾರಿ ಎನಗೆ

**(ಹಿನ್ನೆಲೆ : ವಡ್ಡಾರಾಧನೆಯ ಕತೆಯೊಂದರಲ್ಲಿ ಬರುವ ಸುಧಾಮೆ ಎಂಬ ಹೆಣ್ಣು ತನ್ನ ಮದುವೆಯ ಅಲಂಕಾರವನ್ನು ಅಂದೇ ತೋರಬೇಕೆಂದು ಕಟ್ಟು ಮಾಡಿದ ಸೋದರಮಾವನ ಭಾಷೆ ತೀರಿಸಲೆಂದು ನಡುರಾತ್ರಿ ವಧುವಿನ ಅಲಂಕಾರದಲ್ಲಿ ಬರುವಾಗ ತಳವಾರನಿಂದ ತಡೆಯಲ್ಪಡುತ್ತಾಳೆ. ಆ ಸಂದರ್ಭ ಈ ಕವಿತೆಯ ಬೆನ್ನಿಗೆ.)**

**ಪ್ರಕಾಶಕರು: ಗೀತಾಂಜಲಿ ಪುಸ್ತಕ ಪ್ರಕಾಶನ, ರೆವಿನ್ಯೂ ಬಿಲ್ಡಿಂಗ್, ೧೦೦ ಅಡಿ ರಸ್ತೆ, ರಾಜೇಂದ್ರ ನಗರ, ಶಿವಮೊಗ್ಗ–೫೭೭ ೨೦೧, ಮೊ.೯೪೪೯೮೮೭೪೫೦/೯೯೧೭೪೯೭೨೯೧, ಈ ಮೈಲ್ : gbtmohan@gmail.com, ಬೆಲೆ : ರೂ.೫೦**



ಸಂಜೆ ಇಳಿಯಿತು ಇರುಳು ಕವಿಯಿತು ಹಚ್ಚುತಿರುವೆನು ದೀಪವ॥
ಮೋಡ ನೆರೆಯಿತು ಗಾಳಿ ಮೊರೆಯಿತು ಹೊತ್ತಿಸಿರುವೆನು ದೀಪವ॥
–ಎಚ್.ಎಸ್.ಶಿವಪ್ರಕಾಶ್





ಪ್ರಕಾರ : ಅಂಕಣ ಬರಹ
ಬಹುಮಾನ ವಿಜೇತ ಕೃತಿ :
ತೇಜಸ್ವಿ ಬದುಕಿದ್ದಾರೆ
ಲೇಖಕರು : ಕೀರ್ತಿ ಕೋಲ್ಗಾರ್

# ಹಾ.ಮಾ. ನಾಯಕ್ ಪುಸ್ತಕ ಬಹುಮಾನ





## ಕೀರ್ತಿ ಕೋಲ್ಗಾರ್

ತೀರ್ಥಹಳ್ಳಿ ತಾಲ್ಲೂಕಿನ ಕೋಲ್ಗಾರ್ ಎಂಬ ಊರಿನಂದ ಬಂದ ಕೀರ್ತಿ ಅವರು ಈಗಾಗಲೇ 'ತ್ರಿ ಜಿ ಸರ್ಕಲ್' ಎಂಬ ಕಾದಂಬರಿಯನ್ನು ರಚಿಸಿದ್ದಾರೆ. ಪ್ರಸ್ತುತ ಕನ್ನಡಪ್ರಭ ದಿನಪತ್ರಿಕೆಯ ಮುಖ್ಯ ಉಪಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.




### ತೀರ್ಪುಗಾರರ ಅಭಿಮತ:

## ಅಂಕಣ ಬರಹದಲ್ಲಿ ವಿಶಿಷ್ಟ ಪ್ರಯತ್ನ

ಪತ್ರಿಕಾ ಅಂಕಣ ಬರಹದಲ್ಲಿ ಇದೊಂದು ವಿಶಿಷ್ಟ ಪ್ರಯತ್ನ. ಒಬ್ಬ ಧೀಮಂತ ಲೇಖಕ ಸಾಹಿತ್ಯಲೋಕದಿಂದ ಕಣ್ಮರೆಯಾದ ನಂತರ ಆತ ಉಳಿಸಿ ಹೋದ ನೆನಪುಗಳನ್ನು ಶೋಧಿಸುವ ಒಂದು ಯತ್ನ ಇಲ್ಲಿದೆ. ಇಡೀ ಕೃತಿಯ ಕೇಂದ್ರ ಪೂರ್ಣಚಂದ್ರತೇಜಸ್ವಿ ಅವರೇ ಆಗಿದ್ದರೂ, ಅವರನ್ನು ಬೇರೆ ಬೇರೆ ಆಯಾಮಗಳಿಂದ ಹುಡುಕುವ, ಚಿತ್ರಿಸುವ ಅಪರೂಪದ ಯತ್ನ ಇಲ್ಲಿನ ಬರೆಹಗಳಿಗಿದೆ. ಅಂಕಣ ಬರಹಗಳಿಗೆ ಬೇಕಾದ ಆಕಾರಗಳನ್ನು ಶೋಧಿಸಿ, ಅತ್ಯುತ್ತಮ ಕಥನ ರೂಪದಲ್ಲಿ ಅವನ್ನೆಲ್ಲಾ ನಿರೂಪಿಸಿರುವ ರೀತಿಯೂ ಸೊಗಸಾಗಿದೆ. ಗದ್ಯದ ಲಯ, ಸುಲಭವಾಗಿ ತಿಳಿಯುವ ಭಾಷೆ, ಹೊಸ ರೀತಿಯ ನಿರೂಪಣೆ ಈ ಕೃತಿಗಿರುವ ವಿಶಿಷ್ಟ ಗುಣಗಳು.

## ಬಹುಮಾನಿತ ಕೃತಿಯಿಂದ... ಯಾಕಾದರೂ ಬಂತೀ ಮುಪ್ಪು?

ಇನ್ನು ನಿನ್ನ ಕೈಯಲ್ಲಾಗಲ್ಲ..

ಎದೆಗೇ ಗಾಳ ಹಾಕಿದ ಹಾಕಾಯಿತು. ಹಾಸಿಗೆ ಮೇಲಿಂದ ಸೊಂಟ ನೆಟ್ಟಗೆ ಮಾಡಿ ಮೇಲೆದ್ದವ 'ಸ್ಯಾಂಟಿಯಾಗೊ' ತೆಳು ತೆಳುವಾಗಿ ಕೆಪ್ಪೆದ್ದು ಹೋಗಿದ್ದ ಕಿವಿಗಳ ಮೇಲೆ ಎಂಥ ಬಿಸಿ ಸೀಸದ ಮಾತು ಬಿತ್ತು. ಜಗತ್ತು ಇಂದು ನನ್ನ ಅಸಹಾಯಕತೆಯನ್ನು ತೀರ್ಮಾನಿಸಿಬಿಟ್ಟಿದೆಯಲ್ಲ! ಕಣ್ಣಿನ ಸೀಮೆಯಿಂದ ಜಾರಿದ ಹನಿಗಳು ಮುಖದ ಗೆರೆಗಳ ಹರ್ಡಲ್ಸ್ ಅನ್ನು ಸರದಿ ಪ್ರಕಾರ ದಾಟುತ್ತಲೇ ಇದ್ದವು.

ತಿಮಿಂಗಲಗಳ ಬೆನ್ನನ್ನೆ ತಿವಿದು ಬಂದವನ ವಿಚಿತ್ರ ಸಂಕಟ ಕೇಳುವ ಕಿವಿಗಳು ಸುತ್ತಮುತ್ತ ಒಂದೂ ಇಲ್ಲ. ಪುಟ್ಟ ಹುಡುಗ ಮನೋಲಿನ್ ಕೂಡ ತನ್ನ ಗುಡಿಸಲಿನತ್ತ ಬಂದು ಹೋಗಿಲ್ಲ. ಜೀವವೇ ಬಿದ್ದು ಹೋದ ಮುದುಕನೊಂದಿಗೆ ಮಗನನ್ನು ಸಮುದ್ರಕ್ಕಿಳಿಸಲು ಆ ಮನೋಲಿನ್ನನ ತಾಯಿಯ ಅನುಮತಿಯೂ ಇರಲಿಲ್ಲ. ಜಗತ್ತಿನ ಬಾಯಿ ಬೇಕಾಬಿಟ್ಟಿ ಬಿರಿಬಿಟ್ಟಿದೆ. ಹಿಂದೆಲ್ಲ ಬೆಟ್ಟದಷ್ಟು ಮೀನುಗಳನ್ನು ಶಿಕಾರಿ ಮಾಡಿ ರಾಶಿ ಹಾಕಿದ ಸಾಧನೆ ಅದಕ್ಕೆ ಮುಷ್ಟಿ ತರ ಕಾಣುತ್ತಿದೆ. ಹೀಗಾಗಿಯೇ ಅದು ಹೇಳುತ್ತಿದೆ... 'ಇನ್ನು ನಿನ್ನ ಕೈಯಲ್ಲಿ ಮೀನು ಹಿಡಿಯೊಕ್ಕಾಗಲ್ಲ ಸೋತೆ ಅಂತ ಒಪ್ಪಿಕೋ'

'ಯಾಕಾದರೂ ಬಂತೀ ಮುಪ್ಪು?' ಸ್ಯಾಂಟಿಯಾಗೊ ತನ್ನನ್ನೇ ಕೇಳಿಕೊಂಡ. ಆ ಉಪ್ಪು ನೀರಲ್ಲಿ ಈ ಮುಪ್ಪನ್ನು ಹಿಂಡಿ ಹಾಕಬೇಕಂತ ಅನ್ನಿಸಿತು ಅವನಿಗೆ. ಹಣ್ಣಾದ ಕಣ್ಣಿನಲ್ಲಿ ಆ ರಾತ್ರಿಯ ನಿದ್ದೆ ಇನ್ನೆಲ್ಲಿ ಇಂಗಿ ಸುಖ ಕೊಡಬೇಕು? ಗಾಳ ಹಾಕದೆ ಎಂಬತ್ನಾಲ್ಕು ದಿನಗಳೇ ಉರುಳಿದ್ದವು. ಅದಕ್ಕಾಗಿಯೇ ಜನ ಕೈಲಾಗದವನು ಎನ್ನುತ್ತಿದ್ದಾರೆ. ತನ್ನ ಮೇಲಿನ ಅಸಹಾಯಕ ಆರೋಪವನ್ನು ಕಿತ್ತೊಗೆಯಬೇಕೆಂಬ ಹಠ ಅವನ ನಾಭಿಯಿಂದ ನುಗ್ಗಿ ಬಂದಿದ್ದೇ ಗೊತ್ತು, ಬೆಳಗೆದ್ದೇ ಸಮುದ್ರಕ್ಕಿಳಿಯಬೇಕೆಂದು ತೀರ್ಮಾನಿಸಿಬಿಟ್ಟ ಸ್ಯಾಂಟಿಯಾಗೊ. ವಯಸ್ಸಾಗಿತ್ತು, ಒಪ್ಪಲೇಬೇಕು. ಆದರೆ, ಛಲ-ಹೋರಾಟಗಳ್ಯಾವೂ ಅವನ ಜೋತುಬಿದ್ದ ನರಗಳಿಂದ ಇನ್ನೂ ಇಳಿದಿರಲಿಲ್ಲ.


ಪ್ರಕಾಶಕರು: ಅಭಿರುಚಿ ಪ್ರಕಾಶನ, # ೩೮೬, ೧೪ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು – ೫೭೦ ೦೦೯
ಮೊ.೯೯೮೦೫೬೦೦೧೩, ಈ ಮೈಲ್ : abhiruchiprakashana@yahoo.co.in, ಬೆಲೆ : ರೂ.೧೦೦


### ತೀರ್ಪುಗಾರ ಮಂಡಳಿ

ಡಾ.ಐ.ಜಿ.ಮ್ಯಾಗೇರಿ * ಡಾ.ಟಿ.ರಾಜೇಂದ್ರ * ಹಾಲಸ್ವಾಮಿ ಎಸ್.ಆರ್ * ಬಿ.ಆರ್ ವಿಜಯವಾಮನ * ಡಾ.ಮರ್ಗನಳ್ಳಿ ಪ್ರಕಾಶ * ಡಾ.ಶುಭಾ ಮರವಂತೆ * ನಂಜುಂಡಯ್ಯ ಸಿ.ಎಸ್ * ಡಾ.ಡಿ.ಜಿ.ರಮೇಶ್ * ಕೃಷ್ಣಮೂರ್ತಿ ಸಿರ್ಸಿ * ಲತಾ ಜೋಯ್ಸ್ * ಡಾ.ಶೈಲಜಾ ಹೊಸಳ್ಳೇರ್ * ಸದಾಶಿವ * ಕಲೀಮ್ ಉಲ್ಲಾ * ಅವಿನಾಶ್ * ಹಾಲೇಶಪ್ಪ ಎನ್.ಕೆ. * ಡಾ.ಉಷಾ ರಮೇಶ್ * ಗೋಪಾಲಕೃಷ್ಣ ಕೊಳ್ತಾಯ ಎ.ಜಿ. * ಡಾ.ಎಸ್.ನಾಗಮಣಿ * ಡಾ.ಕೆ.ಎಸ್.ಪವಿತ್ರಾ * ಪ್ರೊ.ಕೆ.ಓಂಕಾರಪ್ಪ * ವಸಂತಕುಮಾರ ಪೈ * ಶ್ರೀಪಾದ ಭಟ್ * ಕಾಂತೇಶ ಕದರಮಂಡಲಗಿ






ಜೀವಜ್ಯೋತಿಯೇ ತೊಳಗಿ ಬೆಳಗು ನೀ ಕಾಳಗತ್ತಲ ಎದೆಯಲಿ।
ಗಾಳಿಯಂತೆ ಮೊರೆಯುತಿರಲಿ ಜ್ಯೋತಿ ಇಂತೇ ಉರಿಯಲಿ॥
–ಎಚ್.ಎಸ್.ಶಿವಪ್ರಕಾಶ್

ಪ್ರಕಾರ : ಸಣ್ಣಕಥಾ ಸಂಕಲನ
ಬಹುಮಾನ ವಿಜೇತ ಕೃತಿ :
ಮಾಯಾ ಕೋಲಾಹಲ
ಲೇಖಕರು : ಮೌನೇಶ ಬಡಿಗೇರ

# ಯು.ಆರ್. ಅನಂತಮೂರ್ತಿ ಪುಸ್ತಕ ಬಹುಮಾನ





## ಮೌನೇಶ ಬಡಿಗೇರ



ಸುಮಾರು ಎಂಟು ಹತ್ತು ವರ್ಷಗಳಿಂದ ರಂಗಭೂಮಿಯಲ್ಲಿ ಸಕ್ರಿಯರಾಗಿರುವ ಕಥೆಗಾರ ಮೌನೇಶ್ ಬಡಿಗೇರ್ ಅವರು ರಂಗನಟನಾಗಿರುವುದಲ್ಲದೇ ಸ್ವತಃ ನಿರ್ದೇಶಕರೂ ಹೌದು. ಬೆಂಗಳೂರು ಮತ್ತು ಕರ್ನಾಟಕದ ಸುತ್ತಮುತ್ತಲಿನ ಸರ್ಕಾರೇತರ ಸಂಘ ಸಂಸ್ಥೆಗಳಿಗೆ, ಕಾಲೇಜು ವಿದ್ಯಾರ್ಥಿಗಳಿಗೆ, ಶಾಲಾ ವಿದ್ಯಾರ್ಥಿಗಳಿಗೆ ರಂಗಭೂಮಿಯ ಕಾರ್ಯಾಗಾರಗಳನ್ನು ಹಾಗೂ ನಾಟಕ ನಿರ್ದೇಶನವನ್ನು ಮಾಡಿರುವ ಬಡಿಗೇರ ಅವರು ಸುಮಾರು ಮೂರು ವರ್ಷಗಳ ಕಾಲ ಬೆಂಗಳೂರಿನ ಖಾಸಗೀ ಸಿನಿಮಾಶಿಕ್ಷಣ ಕಲಿಕಾಕೇಂದ್ರಗಳಲ್ಲಿ ಅಭಿನಯದ ಶಿಕ್ಷಕನಾಗಿ ಕೆಲಸಮಾಡಿದ್ದಾರೆ. 'ಟೋಟೋ ಫಂಡ್ಸ್ ದಿ ಆರ್ಟ್ಸ್' ಕನ್ನಡ ಸಾಹಿತ್ಯದ 'ಯುವ ಬರಹಗಾರ' ಪುರಸ್ಕಾರ, ಛಂದ ಪುಸ್ತಕ ಬಹುಮಾನ, ಸೇರಿದಂತೆ ಹಲವು ಪ್ರಶಸ್ತಿ ಪುರಸ್ಕಾರಗಳು ಮೌನೇಶ್ ಬಡಿಗೇರ ಅವರಿಗೆ ಸಂದಿವೆ.

### ತೀರ್ಪುಗಾರರ ಅಭಿಮತ

## ವಾಸ್ತವ ಜಗತ್ತಿನ ಸಂಕಟಗಳಿಗೆ ಮುಖಾಮುಖಿ

'ಮೌನ ಕೋಲಾಹಲ' ಕೃತಿಯು ಕನ್ನಡ ಕಥಾ ಪರಂಪರೆಯನ್ನು ಹಿಗ್ಗಿಸುವ ಹಾಗೂ ಅದರೊಂದಿಗೆ ಅನುಸಂಧಾನ ಮಾಡುವ ಶಕ್ತಿಯಿರುವ ಒಂದು ಯಶಸ್ವಿ ನಿರೂಪಣೆಯಾಗಿದೆ. ಈ ಕೃತಿ ತನ್ನ ಆತ್ಮವಿಮರ್ಶೆಯ ಗುಣ, ಸಮಾಜದ ರೀತಿ ರಿವಾಜುಗಳನ್ನು ಗ್ರಹಿಸುವ ದೃಷ್ಟಿಕೋನ ಹಾಗೂ ಸಮಕಾಲೀನ ವಾಸ್ತವ ಜಗತ್ತಿನ ಸಂಕಟಗಳಿಗೆ ಮುಖಾಮುಖಿಯಾಗುವ ರೀತಿಯಿಂದ ತಟ್ಟನೆ ಓದುಗರ ಗಮನ ಸೆಳೆಯುತ್ತದೆ. ಒಟ್ಟಾರೆ ಮನುಷ್ಯ ಸಂಬಂಧಗಳನ್ನು ಹಾಗೂ ವೈಯಕ್ತಿಕ ಸಂಬಂಧಗಳನ್ನು ಒಟ್ಟೊಟ್ಟಿಗೆ ಕಥಿಸಬಲ್ಲ ಶಕ್ತಿಯುಳ್ಳ ಇಲ್ಲಿನ ಕಥೆಗಳು ಇದಕ್ಕೆ ಅಗತ್ಯವಿರುವ ಭಾಷೆ–ತಂತ್ರದ ಬಳಕೆಯಿಂದಲೂ ನಮ್ಮ ಗಮನ ಸೆಳೆಯುತ್ತವೆ. ಧಾವಂತದ ಬದುಕಿನ ಮಧ್ಯಮ ವರ್ಗದ ಹುಸಿ ನಂಬಿಕೆಗಳನ್ನು ಮುನ್ನೆಲೆಗೆ ತಂದು, ಅಲ್ಲಿನ ಬಿರುಕುಗಳನ್ನು , ಸಿದ್ಧಮಾದರಿಗಳನ್ನು ತನ್ನ ಕಥಾವಸ್ತುವಾಗಿಸಿರುವುದು ಈ ಕೃತಿಯ ಇನ್ನೊಂದು ಅಂಶ.

### ಬಹುಮಾನಿತ ಕೃತಿಯಿಂದ...

## ನಿಮ್ಮಪ್ಪನ ಹಂಗ ಆಡಬ್ಯಾಡೋ...

ನಿಮ್ಮಪ್ಪನ ಹಂಗ ಆಡಬ್ಯಾಡೋ ಸ್ವಲ್ಪ ಇಚಾರ ಮಾಡು.. ಹೊಡದು ಬುದ್ದಿ ಹೇಳಾಕ ನೀ ಏನಿನ್ನೂ ಸಣ್ಣಾವಲ್ಲ ಕೈಯಾಗಿನ ರೊಕ್ಕ ಕೊಟ್ಟು ಮಂಗ್ಯ ಆಗಬಾರದು.. ಜೀವನದಾಗ ಮುಂದ ಮುಂದ ಬರಬೇಕು... ಅದು ಬಿಟುಗೊಟ್ಟು ಹಿಂದ ಹಿಂದ ಹೋಗಬಾರದು.

ಎಂದು ಅಮ್ಮ ಕಣ್ಣಲ್ಲಿ ನೀರು ತುಂಬಿಕೊಂಡಂತೆ ಸೆರಗಿನ ಅಂಚಲ್ಲಿ ಮೂಗನ್ನು ಸೊರಸೊರ ತಿಕ್ಕಿಕೊಳ್ಳುತ್ತಾ ಎದ್ದು ಅಡುಗೆ ಮನೆ ಕಡೆ ಹೋದಳು. ಎದುರು ಮೂಲೆಯಲ್ಲಿ ಸಿಂಹಾಸನದಂತಿದ್ದ ಟೇಬಲ್ಲು ಬಣಬಣ ಅನ್ನುತ್ತಿತ್ತು. ಇಷ್ಟು ದಿನ ಇಂತಹ ಅದೆಷ್ಟೋ ಭಾವಸಂವಾದಗಳಿಗೆ ಸಾಕ್ಷಿಯಾಗಿದ್ದ ಮನೆಯ ಒಬ್ಬ ಮುಖ್ಯ ಪ್ರತಿನಿಧಿಯಂತಿದ್ದ ಟೀವಿ ಮಹಾರಾಜರನ್ನು ಒಂದು ವಾರದ ಹಿಂದೆಯಷ್ಟೇ ಅವರ ಮಿತಿಮೀರಿದ ಬೀಪಿ, ಶುಗರ್ರುಗಳ ಕಾರಣ ಮೇಯ್ನ ರೋಡಿನ ಶಫಿ ಎಲೆಕ್ಟ್ರಿಕಲ್ಸ್ ನ ತುರ್ತು ಘಟಕದಲ್ಲಿ ಇಡಲಾಗಿತ್ತು.

ಅವರ ಆಪರೇಷನ್ ಖರ್ಚು, ಮೆಡಿಸನ್ ಖರ್ಚು ಅದೂ ಇದು ಎಂದು ಹೇಳಿ ಡಾ: ಶಫಿ ಅವರು ಸಾವಿರಾರು ರೂಪಾಯಿಗಳನ್ನು ಕೆತ್ತಿದ್ದರು. ಇಲ್ಲದಿದದರೆ ಇಷ್ಟು ಹೊತ್ತಿಗೆ ಅಮ್ಮನ ಉಪದೇಶಗಳಿಗೆ ಸರಿಹೊಂದುವಂತೆ ತನ್ನ ಡಯಲಾಗಿನ ಮೂಲಕವೋ, ಜಾಹಿರಾತಿನ ಮೂಲಕವೋ, ಹಾಡಿನ ಮೂಲಕವೋ, ಫೈಟಿಂಗಿನ ಮೂಲಕವೋ, ಬ್ರೇಕಿಂಗ್ ನ್ಯೂಸಿನ ಮೂಲಕವೋ ಒಟ್ಟಿನಲ್ಲಿ ತನ್ನದೇ ಹಿಮ್ಮೇಳವನ್ನು ಒದಗಿಸಿಕೊಡುವುದರ ಮೂಲಕ ಇಡೀ ದೃಶ್ಯಕ್ಕೆ ಒಂದು ಘನತೆಯನ್ನು ಒದಗಿಸಿಕೊಡುತ್ತಿದ್ದರು. ಆದರೆ ಈಗ ....

**ಪ್ರಕಾಶಕರು: ಛಂದ ಪುಸ್ತಕ, ಐ–೦೦೪, ಮಂತ್ರಿ ಪ್ಯಾರಡೈಸ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು – ೫೬೦ ೦೭೬**
**ಮೊ.೯೮೪೪೪ ೨೨೭೮೨, ಈ ಮೈಲ್ : vas123u@rocketmail.com, ಬೆಲೆ : ರೂ.೧೦೦**









ಪ್ರಕಾರ : ನಾಟಕ
ಬಹುಮಾನ ವಿಜೇತ ಕೃತಿ : ಬೆತ್ತಲಾಟ
ಲೇಖಕರು : ಡಾ.ಪ್ರಕಾಶ ಗರುಡ

# ಕೆ.ವಿ. ಸುಬ್ಬಣ್ಣ ಪುಸ್ತಕ ಬಹುಮಾನ





## ಡಾ.ಪ್ರಕಾಶ ಗರುಡ




ವೃತ್ತಿ ಹಾಗೂ ಸಮಕಾಲೀನ ಹವ್ಯಾಸಿ, ರೆಪರ್ಟರಿ ಹೀಗೆ ರಂಗಭೂಮಿಯ ವಿವಿಧ ಪ್ರಕಾರಗಳಲ್ಲಿ ೨೫ ವರ್ಷಗಳಿಂದ ನಟಿಸಿದ ಅನುಭವವಿರುವ ಡಾ.ಪ್ರಕಾಶ ಗರುಡ ಅವರು ನೀನಾಸಂ ತಿರುಗಾಟದಲ್ಲಿ ಮುಖ್ಯನಟನಾಗಿ ಅಭಿನಯಿಸಿದ್ದಾರೆ. ತುಘಲಕ್, ಮೃಚ್ಛಕಟಿಕ, ದೊರೆ ಈಡಿಪಸ್, ಅಂಜುಮಲ್ಲಿಗೆ, ವಾಯ್‌ಝೂಕ್, ಕದಡಿದ ನೀರು ಮುಂತಾದ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ರಂಗ ಕಾರ್ಯಾಗಾರ, ಗೊಂಬೆಯಾಟ ತರಬೇತಿ ಕುರಿತಂತೆ ಕಮ್ಮಟಗಳನ್ನು ನಡೆಸಿಕೊಟ್ಟಿದ್ದಾರೆ. ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ, ಸಾಂಸ್ಕೃತಿಕ ಗುರು ಪ್ರಶಸ್ತಿ ಸೇರಿದಂತೆ ಹಲವು ಪುರಸ್ಕಾರಗಳು ಡಾ.ಪ್ರಕಾಶ ಗರುಡ ಅವರಿಗೆ ಸಂದಿವೆ.

## ತೀರ್ಪುಗಾರರ ಅಭಿಮತ:

**ಪ್ರಯೋಗಕ್ಕೆ ತೆರೆದುಕೊಳ್ಳುವ ಗುಣ**

ಸಾಮಾಜಿಕ ಬದ್ಧತೆಯನ್ನು ಬಿಂಬಿಸುವ ಈ ಕೃತಿ ಜಾಗೃತ ರಂಗಭೂಮಿಗೆ ಒಂದು ಉತ್ತಮ ಕೊಡುಗೆ. ಪ್ರದರ್ಶನಕ್ಕೆ ಬೇಕಾದ ಎಲ್ಲಾ ಸಾಧ್ಯತೆಗಳನ್ನು , ಅಂಶಗಳನ್ನು ಹೊಂದಿರುವ ಈ ಕೃತಿ ಸಮಾಜಕ್ಕೆ ಒಂದು ಕನ್ನಡಿಯಾಗಿದ್ದು ಹೊಸ ಪ್ರಯೋಗಕ್ಕೆ ತೆರೆದುಕೊಳ್ಳುವ ಗುಣವನ್ನು ಹೊಂದಿದೆ.

## ಬಹುಮಾನಿತ ಕೃತಿಯಿಂದ...

# ನನ್ನ ಸೌಂದರ್ಯದ ಖಣಿಯೇ

**ಹೆಂ**ಗಸು: (ಅಷ್ಟೆ ನಾಟಕೀಯವಾಗಿ) ಆಹಾ! ಪ್ರಾಣಕಾಂತ. . . . ಎಷ್ಟು ಕೋಮಲ ನಿಮ್ಮ ಮನಸ್ಸು . . . ಏನು . . . . ನಿಮ್ಮ ರೂಪಾ. . . .ಏನು ನಿಮ್ಮ ವೇಷ. . . ನಿಜವಾಗಿ ಈ ಗ ನೀವು ಸಭ್ಯ ಗೃಹಸ್ಥರಂತೆ ಕಾಣುತ್ತೀರಿ. . . ಆದರ . . . ಆದರ. . . ಈ ಉಪಕಾರ ಹ್ಯಾಂಗ ತೀರಸಬೇಕೋ ಗೊತ್ತ ಆಗವಲ್ಲು.

ಎ.ಕ.:ಭಯ. . . ಲಜ್ಜೆ ಬಿಡು. . . ಬಿಡು ಪ್ರಿಯೆ . . . ಬಂದೊಗಿದ ಆಪತ್ತಿನಿಂದ ಪಾರಾಗುವ ಭಯ ನಮಗೆ ಸಿಕ್ಕೇ ಸಿಗುತ್ತದೆ ಎಂಬ ನಂಬಿಕೆ ನನಗ ಇದ್ದೇ ಇದೆ.

ನನ್ನ ಸೌಂದರ್ಯದ ಖಣಿಯೇ
ಮಮ ಚಿತ್ತ ಚಕೋರ ಹಂಸೆ
ಈಗ ನನ್ನನ್ನ ಗಟ್ಟಿಯಾಗಿ ಹಿಡಿದುಕೊ
ಪ್ರೀತಿ ನಮ್ಮನ್ನ ಖಂಡಿತವಾಗಿ ಕಾಪಾಡುತ್ತದೆ.
ಅಪ್ಪಿಕೋ.... ಹಾಗೆ ಅಂಟಿಕೊ

ಎ.ಕ. : ಏಯ್ .... ಕಟ್.... ಸ್ವಲ್ಪ ತಡೀರಿ.... ನೀವಿಬ್ಬರೂ ಹೀಂಗ ಅಂಟ ಹಚಿಕೊಂಡು ಗಟ್ಯಾಗ ಅಂಟಿಗೋಳೋಕ್ಕಿಂತ ಮೊದಲು ನನಗ ಇದನ್ನ ಹೇಳ್ರಿ ನನ್ನ ಕಸದ ಡಬ್ಬಿ .... ಕಸಬರಿಗಿ ತೊಗೊಂಡು ನಾ ಏನ್ ಮಾಡ್ಲಿ, ಒಂದ ಪಟ್ಟಿಗೆ ಎರ್ಡೆರ್ಡು ಕಸದ ಗಾಡಿ ನೂಕ್ಕೊಂದು ಎರ್ಡೆರ್ಡು ಕಸಬರಿಗಿ ಹಿಡಕೊಂದು ಹೋಗಾಕ್ಯ ಆಕ್ಕೈತೇನಪಾ ಆಕಸ್ಮಾತ್ ದಾರ್‍ಯಾಗ ಮುನಸಿಪಾಲ್ಟಿ ಕಸದ ಸಾಹೇಬ ನೋಡಿ 'ಲೇ ಈ ಗಾಡಿ ನಿಂದ ಅಲ್ಲಾ' 'ಎರಡನೇ ಗಾಡಿ ಯಾರದಲೇ' ಅಂತ ಟಬರ ಮಾಡಿದ್ರ ನಾ ಏನ್ ಜವಾಬ್ ಕೊಡ್ಲಿ ಹೌದಲ್ಲ ಮಿತ್ರಾ ಆ ಬಗ್ಗೆ ನಾ ವಿಚಾರನ ಮಾಡಿಲ್ಲ ಈಗೇನು ಮಾಡೋಣ?

ಪ್ರಕಾಶಕರು: ಮನೋಹರ ಗ್ರಂಥಮಾಲಾ, ಲಕ್ಷ್ಮಿ ಭವನ, ಸುಭಾಶ್ ರಸ್ತೆ, ಧಾರವಾಡ – ೫೮೦ ೦೦೧
ದೂ. ೦೮೩೬ – ೨೪೪೧೮೨೨, ೨೪೪೧೮೨೩, ವೆಬ್‌ಸೈಟ್ : www.granthamala.com, ಬೆಲೆ : ರೂ.೬೦

ಪ್ರಕಾರ : ಪ್ರವಾಸ ಸಾಹಿತ್ಯ
ಬಹುಮಾನ ವಿಜೇತ ಕೃತಿ :
ಕುಮಾರ ಪರ್ವತದ ಸುತ್ತಮುತ್ತ
ಲೇಖಕರು : ಜಿ.ಎನ್.ಅಶೋಕವರ್ಧನ

# ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿ ಪುಸ್ತಕ ಬಹುಮಾನ





## ಜಿ.ಎನ್.ಅಶೋಕವರ್ಧನ




ಅತ್ರಿ ಬುಕ್ ಸೆಂಟರ್ ಮೂಲಕ ಸಾಹಿತ್ಯ ಕೃತಿಗಳನ್ನು ಓದುಗರಿಗೆ ತಲುಪಿಸುವ ಕಾಯಕವನ್ನು ಮೂವತ್ತಾರು ವರ್ಷಗಳಷ್ಟು ದೀರ್ಘಕಾಲ ನಡೆಸಿದ ಅಶೋಕವರ್ಧನ ಅವರಿಗೆ ಪರ್ವತಾರೋಹಣದಲ್ಲಿ ತೀವ್ರ ಆಸಕ್ತಿ. ಅದರ ಫಲವೇ ಬಹುಮಾನಿತ ಈ ಕೃತಿ . ಯಕ್ಷಗಾನ ಸೇರಿದಂತೆ ವಿವಿಧ ರಂಗಕಲೆಗಳಲ್ಲಿಯೂ ಅಶೋಕವರ್ಧನ ಅವರಿಗೆ ಆಸಕ್ತಿಯಿದೆ.

### ತೀರ್ಪುಗಾರರ ಅಭಿಮತ

## ನವಿರಾದ ಹಾಸ್ಯ, ರಂಜನೀಯ ಶೈಲಿ

ಬಂಡೆ, ಕಾಡು, ಶಿಖರ, ಜಲಪಾತಗಳನ್ನು ಅರಸಿ, ಸವಲತ್ತುಗಳೊಡನೆ ಬೀಡು ಬಿಟ್ಟು ತಿರುಗಾಡುವುದನ್ನೇ 'ಚಾರಣ' ಎಂದು ಭಾವಿಸಿ ದಂಡೆತ್ತಿ ಪ್ರವಾಸ ಹೊರಡುವ ಇಂದಿನ ಯುವ ಜನಾಂಗಕ್ಕೆ, ಚಾರಣವೆಂದರೆ ಪ್ರಾಕೃತಿಕ ಸತ್ಯಗಳ, ಸೂಕ್ಷ್ಮಗಳ ಬಹುಶ್ರಮ ವೀಕ್ಷಣೆ, ತುಲನೆ, ಅರಿಯುವ ಜಾಣ್ಮೆ ಮತ್ತು ಅಧ್ಯಯನ ಎಂಬುದನ್ನು ಈ ಪುಸ್ತಕ ಮನವರಿಕೆ ಮಾಡಿಕೊಡುತ್ತದೆ. ಮೂಲತಃ ಪರ್ವತಾರೋಹಿಯಾದ ಲೇಖಕರು ಚಾರಣದ ಕೌತುಕ, ರೋಚಕತೆಯನ್ನು ಸಮರ್ಥವಾಗಿ ಹಿಡಿದಿಟ್ಟು ಕೊಟ್ಟಿದ್ದಾರೆ. ಚಾರಣದ ಅನುಭವಗಳನ್ನು, ಅದು ಕಲಿಸಿಕೊಟ್ಟ ಪಾಠಗಳನ್ನು ಸ್ವಾರಸ್ಯಕರ ಶೈಲಿಯಲ್ಲಿ ಚಿತ್ರಿಸಿದ್ದಾರೆ. ಮತ್ತದೇ ಕಾಡು–ಮೇಡು, ಹಸಿರು–ನೀರು ಸುತ್ತಮುತ್ತಲೇ ಕಥ ಸುತ್ತುತ್ತಿದ್ದರೂ ನವಿರಾದ ಹಾಸ್ಯ, ರಂಜನೀಯ ಶೈಲಿಯಿಂದಾಗಿ ಎಲ್ಲಿಯೂ ಬೇಸರವಾಗದಂತೆ ಕಥನದ ಓಘ ಕಾಯ್ದಿಟ್ಟುಕೊಂಡಿದ್ದಾರೆ.

### ಬಹುಮಾನಿತ ಕೃತಿಯಿಂದ...

## ಸೂರ್ಯನ ನೇರ ಪ್ರತಿಫಲನಕ್ಕೆ ಇಟ್ಟ ಕನ್ನಡಿಯೋ..

ಕುಳ್ಕುಂದದಲ್ಲಿ ಸ್ಪಷ್ಟ ಪೂರ್ವಮುಖಿಯಾಗಿ ಹೊರಟ ಬಿಸಿಲೆಯ ದಾರಿ ಅಡ್ಡ ಹೊಳೆಯಗುಂಟ ಏರೇರುತ್ತಾ ಪೂರ್ಣ ಉತ್ತರಮುಖಿಯೇ ಆಗುವ ಹಂತದಲ್ಲಿ ನಾನು ಹಿಂದೆಲ್ಲಾ ಹೇಳಿದ ಸಂಕ ಹಿಡಿಯುತ್ತದೆ. ಅಲ್ಲದು ಹೊಳೆಯ ಪೂರ್ವ ದಂಡೆ ಸೇರಿದರೂ ಹಿಮ್ಮುರಿ ತಿರುವು ತೆಗೆದುಕೊಂಡಂತೇ ಪೂರ್ಣ ದಕ್ಷಿಣಮುಖಿಯಾಗಿ ಘಟ್ಟ ನಿಭಾಯಿಸಲು ತೊಡಗುತ್ತದೆ. ಇಲ್ಲಿನ ದಟ್ಟ ಹಸಿರಿನ ನಡುವೆ ಅನತಿ ದೂರದಲ್ಲೇ ನಮಗೆ ಮುಂಡು ಪಾತ್ರವೊಂದು ತೆರೆಮರೆಯ ಕುಣಿತ (= ತೆರೆ ಪೊರ್ಪಾಟ್, ಯಕ್ಷಗಾನದಲ್ಲಿ ವಿಶಿಷ್ಟ ಪಾತ್ರಗಳ ರಂಗಪ್ರವೇಶ ತಂತ್ರ) ಕೊಟ್ಟಂತೆ, ಪಶ್ಚಿಮಕ್ಕೆ ಬಂಡೆಮೈ ತೆರೆದುಕೊಂಡ ಶಿಖರ ಬಾಳಕಲ್ಲು ಬೆಟ್ಟ

(ಸಮುದ್ರ ಮಟ್ಟದಿಂದ ೬೫೨ಮೀ.), ನಮ್ಮ ಕುತೂಹಲ ಕೆರಳಿಸುತ್ತದೆ. ಈ ಶಿಖರ ಮಂಕಾಡಿಸುತ್ತ ಇನ್ನೇನು ಅದರೆತ್ತರಕ್ಕೆ ತಲುಪಿದೆವೆನ್ನುವಾಗ, ಐದನೆಯ ಹಿಮ್ಮುರಿ ತಿರುವು ಕಳೆದು ಉತ್ತರ – ಪೂರ್ವಮುಖಿಗಳಾಗುವಾಗ, ಒಮ್ಮೆಗೆ ಭಾರೀ ಶಿಲಾ ಮುಖದ ಶಿಖರವೊಂದು ಕಣ್ಣು ತುಂಬುತ್ತದೆ. ತೆರೆಮರೆಯ ಕಲಾಪಗಳನ್ನೆಲ್ಲಾ ಸಣ್ಣ ವೇಷದವರು ಮುಗಿಸಿ ಒಡ್ಡೋಲಗ ದೃಶ್ಯಕ್ಕಾಗುವಾಗ ರಾಜ ವೇಷಧಾರಿ ತಣ್ಣಗೆ ಬಂದು ಸಿಂಹಾಸನ ಆವರಿಸಿಕೊಂಡ ಹಾಗೆ! ಪಶ್ಚಿಮಕ್ಕೆ ಎದೆ ಸೆಟೆಸಿ ನಿಂತಂತಿರುವ ಈ ಕಡಿದಾದ ಬಂಡೆಮೈ ಬುಡದಿಂದ ಸುಮಾರು ಒಂದು ನೂರು ಹತ್ತು ಮೀಟರ್ ಎತ್ತರವೂ ಅದರ ಶಿಖರ ಸಮುದ್ರಮಟ್ಟದಿಂದ ೮೭೫ ಮೀಟರ್ ಎತ್ತರವೂ ಇದೆ. ಸರ್ವೇಕ್ಷಣ ಇಲಾಖೆಯ ಭೂಪಟ ಇದನ್ನು ಕರ್ಣಕಲ್ ಬೆಟ್ಟವೆಂದು ಹೆಸರಿಸುತ್ತದೆ. ಈ ಬಂಡೆ ಮಳೆ ಕಳೆದ ಮೊದಲಲ್ಲಿ ಮತ್ತೆ ಮಂಜು ಮಿಂದ ಕಾಲಗಳಲ್ಲಿ ಅದರಲ್ಲೂ ಇಳಿ ಸೂರ್ಯನ ನೇರ ಪ್ರತಿಫಲನಕ್ಕೆ ಇಟ್ಟ ಕನ್ನಡಿಯೋ ಎಂಬಂತೆ ಜನಪದರಿಗೆ ಕಂಡದ್ದಕ್ಕೆ ಜನಜನಿತ ಹೆಸರು ಕನ್ನಡಿಕಲ್ಲು.

ಪ್ರಕಾಶಕರು: ಅಭಿನವ, ೧೭/೧೮/–೨, ೧ನೇ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು–೫೬೦ ೦೪೦
ಮೊ.೯೪೪೮೮೦೪೯೦೫, ಈ ಮೈಲ್ : abhinavaravi@gmail.com, ಬೆಲೆ : ರೂ.೧೦೦









ಪ್ರಕಾರ : ವಿಜ್ಞಾನ ಸಾಹಿತ್ಯ
ಬಹುಮಾನ ವಿಜೇತ ಕೃತಿ :
ಬಾಲಂಕೃತ ಚುಕ್ಕಿ ಧೂಮಕೇತು
ಲೇಖಕರು : ಡಾ.ಬಿ.ಎಸ್ ಶೈಲಜಾ

# ಹಸೂಡಿ ವೆಂಕಟಶಾಸ್ತ್ರಿ ಪುಸ್ತಕ ಬಹುಮಾನ





## ಡಾ.ಬಿ.ಎಸ್.ಶೈಲಜಾ




ಬೆಂಗಳೂರಿನ ಜವಹರಲಾಲ್ ನೆಹರೂ ತಾರಾಲಯದಲ್ಲಿ ನಿರ್ದೇಶಕರಾಗಿರುವ ಡಾ.ಬಿ.ಎಸ್ ಶೈಲಜಾ ಅವರು ಬಾಹ್ಯಾಕಾಶಕ್ಕೆ ಸಂಬಂಧಿಸಿದಂತೆ ಕನ್ನಡ ಮತ್ತು ಆಂಗ್ಲ ಭಾಷೆಗಳಲ್ಲಿ ಹಲವು ಕೃತಿಗಳನ್ನು ರಚಿಸಿರುವುದಲ್ಲದೇ ಪತ್ರಿಕೆಗಳಲ್ಲಿ ನೂರಾರು ಲೇಖನಗಳನ್ನು ಬರೆದು ಜನರಿಗೆ ಈ ಕ್ಷೇತ್ರದ ಜ್ಞಾನಪ್ರಸಾರ ಮಾಡುತ್ತಿದ್ದಾರೆ. ಡಾ.ಬಿ.ಎಸ್ ಶೈಲಜಾ ಅವರು ಬಾಹ್ಯಾಕಾಶ ಕುರಿತಂತೆ ಹೊಸತು ಮಾಸಪತ್ರಿಕೆ ಮತ್ತು ಪ್ರಜಾವಾಣಿ ದಿನಪತ್ರಿಕೆಗಳಲ್ಲಿ ಅಂಕಣಗಳನ್ನು ಬರೆದಿದ್ದಾರೆ.

## ತೀರ್ಪುಗಾರರ ಅಭಿಮತ:

### ವಿಶಾಲವಾದ ಸಂಶೋಧನಾ ಅನುಭವ

ಕನ್ನಡ ಭಾಷೆಯ ಮೇಲಿನ ಹಿಡಿತ, ವಿಶಾಲವಾದ ಸಂಶೋಧನಾನುಭವ ಮತ್ತು ಸಾಮಾನ್ಯರಿಗೆ ವಿಜ್ಞಾನದಂತಹ ಸಂಕೀರ್ಣವಾದ ವಿಷಯಗಳ ಬಗ್ಗೆ ತಿಳುವಳಿಕೆ ನೀಡಬೇಕೆನ್ನುವ ಆಂತರಿಕ ಆಸಕ್ತಿ ಈ ಸುಂದರ ಕಿರು ಹೊತ್ತಿಗೆ ಬರೆಸಿದೆ. ಈ ಪುಸ್ತಕದ ಹನ್ನೊಂದು ಅಧ್ಯಾಯಗಳಲ್ಲಿ ಧೂಮಕೇತುಗಳ ಸಂಕ್ಷಿಪ್ತ ಇತಿಹಾಸ ಅವುಗಳ ಹಿಂದಿನ ಗಣಿತ. ಭೌತಶಾಸ್ತ್ರ ಮತ್ತು ಧೂಮಕೇತುಗಳ ಬಗೆಗೆ ಮಾಹಿತಿ ಪಡೆಯಲು ಪ್ರಯತ್ನಿಸಿದ ಖಗೋಳ ವಿಜ್ಞಾನಿಗಳ ಬಗ್ಗೆ ಉತ್ತಮ ಮಾಹಿತಿ ಒದಗಿಸಿದ್ದಾರೆ. ಇಲ್ಲಿ ಅವರು ಬಳಸಿದ ಚಿತ್ರಗಳು ಸಾಕಷ್ಟು ಉಪಯುಕ್ತವಾಗಿವೆ. ಪುಸ್ತಕದ ಕಡೆಯಲ್ಲಿ ಅನುಬಂಧದಲ್ಲಿ, ಕೆಲವು ಧೂಮಕೇತುಗಳ ಹಿಂದಿನ ದಾಖಲೆಗಳು ಅವುಗಳ ಸಂಕ್ಷಿಪ್ತ ರಾಸಾಯನಿಕ ಸಂಯೋಜನೆಗಳ ಬಗ್ಗೆ ದಾಖಲೆ ಒದಗಿಸಿದ್ದಾರೆ. ಧೂಮಕೇತುಗಳ ಬಗ್ಗೆ ಅಧ್ಯಯನ ಮಾಡಲು ಆಸಕ್ತಿ ಇರುವವರಿಗೆ ಸಾಕಷ್ಟು ಅಕರಗಳನ್ನು ಕೊಡಲಾಗಿದೆ. ನಿರಂತರ ಅಧ್ಯಯನ, ಸಂಶೋಧನೆ ಮತ್ತು ಆಸಕ್ತಿ ಇದ್ದರೆ ಮಾತ್ರ ವೈಜ್ಞಾನಿಕ ಮಾಹಿತಿಗಳ ಈ ರೀತಿಯ ಸುಂದರ ಜನಪ್ರಿಯ ಸಾಹಿತ್ಯರೂಪದಲ್ಲಿ ಮೂಡಿ ಬರಲು ಸಾಧ್ಯ. ಈ ಪುಸ್ತಕದ ಪ್ರತಿ ಪುಟದಲ್ಲೂ ಕೃತಿಗಾರರ ಅನುಭವದ ಸೊಗಡು ಅನುಭವವೇದ್ಯವಾಗುತ್ತದೆ.

## ಬಹುಮಾನಿತ ಕೃತಿಯಿಂದ...

# ಚಿಕ್ಕ ಧೂಮಕೇತು ದೊಡ್ಡ ಸಮಸ್ಯೆ



ಇನ್ನೂರು ವರ್ಷಗಳ ಹಿಂದೆ ವೋಲ್ಟೇರ್ ಎಂಬುವನು ಒಂದು ವಿಚಿತ್ರ ಸಿದ್ಧಾಂತ ಮುಂದಿಟ್ಟಿದ್ದ. ಸಿರಿಯಸ್ ಎಂಬ ನಕ್ಷತ್ರದಿಂದ ಬಂದ ದೈತ್ಯನೊಬ್ಬ ಸೌರವ್ಯೂಹದಲ್ಲೆಲ್ಲಾ ಅಡ್ಡಾಡುತ್ತಿದ್ದ. ಅವನು ಧೂಮಕೇತುಗಳ ಮೇಲೆ ಹೆಜ್ಜೆ ಊರಿ ಮುಂದೆ ಸಾಗುತ್ತಿದ್ದನಂತೆ. ಮುಂದೆ ಬಂದ ಲೆಪ್ಲಾಸ್ ಮುಂತಾದ ಅನೇಕರು ಧೂಮಕೇತುಗಳೆಂದರೆ ಆಲಿಕಲ್ಲಿನಂತೆ ಮಳೆ ಸುರಿಸುವ ಕಾಯಗಳು ಎಂದೇ ನಂಬಿದ್ದರು. ಈ ಎಲ್ಲ ಊಹಾಪೋಹಗಳಿಗೆ ಕತ್ತರಿ ಪ್ರಯೋಗ ಮಾಡಲು ಬಹಳ ಸಮಯವೇ ಬೇಕಾಯಿತು.

ಎನ್ಕೆ ಎಂಬ ಧೂಮಕೇತು ಕೇವಲ ಮೂರು ವರ್ಷಗಳಿಗೊಮ್ಮೆ ಸೂರ್ಯನನ್ನು ಸುತ್ತಿ ಬರುವುದು. ಅತಿ ಚಿಕ್ಕ ಪರಿಭ್ರಮಣಾವಧಿ ಇದು ಎನ್ನಬಹುದು. ಅನೇಕರು ಇದನ್ನು 'ಕಂಡುಹಿಡಿದಿದ್ದರು' ಎಂದು ತೋರಿಸಿಕೊಟ್ಟವನೇ ಜೋಸೆಫ್ ಎನ್ಕೆ. ಇದು ಈಗಲೂ ಕರಾರುವಕ್ಕಾಗಿ ಬಂದುಹೋಗುತ್ತಿದೆ. ಅದಕ್ಕೆ ಹೇಳಿಕೊಳ್ಳುವಂತಹ ಬಾಲ ಇಲ್ಲ – ಹೀಗಾಗಿ ಅದು ಜನ ಸಾಮಾನ್ಯರನ್ನು ಆಕರ್ಷಿಸುವುದಿಲ್ಲ. ವಿಜ್ಞಾನಿಗಳ ಲೆಕ್ಕಕ್ಕೆ ಅದು ಒಂದು 'ಚಿಕ್ಕ' ಧೂಮಕೇತು.

ಪ್ರಕಾಶಕರು: ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೆಟ್ ಲಿ. ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧
ದೂ.೦೮೦ ೩೦೫೬೮೦೭೦, ಫ್ಯಾಕ್ಸ್ :೦೮೦ ೩೦೫೬೮೦೭೩, ಈ ಮೈಲ್:navakarnataka@gmail. om, ಬೆಲೆ : ರೂ.೮೦

ಪ್ರಕಾರ : ಮಕ್ಕಳ ಸಾಹಿತ್ಯ
ಬಹುಮಾನ ವಿಜೇತ ಕೃತಿ :
ಹಾರದಿರಲಿ ಪ್ರಾಣಪಕ್ಷಿ
ಲೇಖಕರು : ಹ.ಸ.ಬ್ಯಾಕೋಡ

# ನಾ. ಡಿಸೋಜ ಪುಸ್ತಕ ಬಹುಮಾನ





## ಹ.ಸ.ಬ್ಯಾಕೋಡ




ವಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಹಳ್ಳೂರು ಗ್ರಾಮದ ಹ.ಸ.ಬ್ಯಾಕೋಡ ಅವರು ದೈಹಿಕ ಶಿಕ್ಷಕರಾಗಿ ಹಾಗು ಪತ್ರಕರ್ತರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಹವ್ಯಾಸಿ ವನ್ಯಜೀವಿ ಛಾಯಾಗ್ರಾಹಕರಾಗಿ ಶ್ರೀಲಂಕಾ, ಹಾಂಗ್‌ಕಾಂಗ್ ಸೇರಿದಂತೆ ಹತ್ತಾರು ದೇಶಗಳಲ್ಲಿ ನಡೆದ ಅಂತಾರಾಷ್ಟ್ರೀಯ ಛಾಯಾಚಿತ್ರ ಸ್ಪರ್ಧೆಗಳ ಭಾಗವಹಿಸಿ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದಿದ್ದಾರೆ. ಇದುವರೆಗೂ ಬ್ಯಾಕೋಡರ ಹತ್ತು ಮಕ್ಕಳ ಸಾಹಿತ್ಯ ಕೃತಿಗಳು ಪ್ರಕಟಗೊಂಡಿವೆ. ಕನ್ನಡ ಸಾಹಿತ್ಯ ಪರಿಷತ್ತಿನ ಅರಳು ಪ್ರಶಸ್ತಿ, ಸಾಹಿತ್ಯ ಸೇತು ಪ್ರಶಸ್ತಿ ಹಾಗು ಅತ್ತಿಮಬ್ಬೆ ಸಾಹಿತ್ಯ ಪ್ರಶಸ್ತಿಗಳು ಇವರಿಗೆ ಸಂದಿವೆ.

### ತೀರ್ಪುಗಾರರ ಅಭಿಮತ

## ಸರಳ ಹಾಗೂ ನೇರವಾದ ಸಂಭಾಷಣೆ

ಮಕ್ಕಳಲ್ಲಿ ಒಂದು ಆದರ್ಶವನ್ನು ಹರಿಯಬಿಟ್ಟು, ಅವರಲ್ಲಿ ಪರಿಸರ ಕಾಳಜಿಯಿಂದಾಗಿ ಏಳಬಹುದಾದ ಪ್ರಶ್ನೆಗಳಿಗೆ ಅಲ್ಲಲ್ಲೇ ಸಮಾಧಾನ ನೀಡುತ್ತ ಸಾಗಿರುವ ಇಲ್ಲಿನ ಕಥಾನಕ ಮಕ್ಕಳಿಗೆ ಖುಷಿ ಕೊಡುವಂತಿದೆ. ಪರಿಸರ ನಾಶದ ಬಗ್ಗೆ ಸರಳವಾಗಿ ಅರಿವು ಮೂಡಿಸುತ್ತ, ಭೂಗರ್ಭದ ಖನಿಜ ಸಂಪತ್ತು, ಅಂತರಿಕ್ಷದಲ್ಲಿನ ಉಪಗ್ರಹ ಉಡಾವಣೆ, ಓಜೋನ್ ಪದರ ಹೀಗೆ ಎಗ್ಗಿಲ್ಲದೆ ನಡೆಯುತ್ತಿರುವ ಲೂಟಿಯ ಬಗ್ಗೆ ಕುತೂಹಲ ಕೆರಳಿಸುತ್ತಾ, ಸರಿ ತಪ್ಪು ಯಾವುದು ಎಂಬ ಬಗ್ಗೆ ಈ ಕೃತಿ ಆಲೋಚನೆಗೆ ಹಚ್ಚುತ್ತದೆ. ಮಕ್ಕಳಲ್ಲಿ ಜೀವಪರ ನಿಲುವನ್ನು ತುಂಬುತ್ತದೆ. ಹಕ್ಕಿಗಳನ್ನೇ ಪಾತ್ರವಾಗಿಸಿರುವ ಇಲ್ಲಿ ಅವುಗಳೊಂದಿಗೆ ನಾವೂ ಸಮಸ್ಯೆಯಲ್ಲಿ ಸಿಕ್ಕಿಕೊಂಡ ತಲ್ಲೀನತೆ ದಕ್ಕುತ್ತದೆ. ಸರಳ ಹಾಗೂ ನೇರವಾದ ಸಂಭಾಷಣೆಯ ಶೈಲಿಯಲ್ಲಿ ಸಾಗುವ ಕಾದಂಬರಿಯಲ್ಲಿ ಓದಿಸಿಕೊಂಡು ಹೋಗಬಲ್ಲ ಏಕ ಸೂತ್ರವಿದೆ.

## ಬಹುಮಾನಿತ ಕೃತಿಯಿಂದ... ಹೊನ್ನಕ್ಕಿ ದಂಪತಿಗಳು

ಪೂರ್ವದಲ್ಲಿ ಇನ್ನೂ ಸೂರ್ಯ ಉದಯಿಸಿರಲಿಲ್ಲ. ಅಷ್ಟೊತ್ತಿಗಾಗಲೇ ಶ್ಯಾಮಕ್ಕಿ ತನ್ನ ಇಂಪಾದ ಕಂಠದಿಂದ ಕುಹ್ಹೂ.. ಕುಹ್ಹೂ.. ಅಂತ ಕೂಗಿ ಎಲ್ಲರನ್ನ ಎಚ್ಚರಗೊಳಿಸಿತು. ಅದರ ಕೂಗಿಗೆ ಸೂರಕ್ಕಿ ಸುವ್ವಿ ಹಕ್ಕಿಗಳು ಧ್ವನಿಗೂಡಿಸಿ ಸುಮಧುರವಾಗಿ ಹಾಡತೊಡಗಿದವು. ಹಾಗೆಯೇ ಮಿಕ್ಕೆಲ್ಲಾ ಹಕ್ಕಿಗಳು ಒಂದೊಂದಾಗಿ ತಮ್ಮ ಗಂಟಲು ಸರಿಪಡಿಸಿಕೊಳ್ಳುತ್ತಲೇ ತರತರವಾಗಿ ಕೂಗಲು ಆರಂಭಿಸಿದವು. ಕ್ಷಣಕ್ಷಣಕ್ಕೂ ಎಲ್ಲ ಹಕ್ಕಿಗಳ ಕೂಗು ಸುಮಧುರ ಗಾನವಾಗಿ ಹೊರ ಹೊಮ್ಮತೊಡಗಿತು. ತಡರಾತ್ರಿ ತನ್ನ ಅಜ್ಜನೊಂದಿಗೆ ಮಲಗಿದ್ದ ಮರಿಹೊನ್ನಕ್ಕಿ ನಿದ್ದೆಯಿಂದ ಎದ್ದು ಕುಳಿತಿತು. ಅದು ಎಂದು ಅಷ್ಟೊಂದು ಸ್ನೇಹಿತರ ಧ್ವನಿಯನ್ನ ಒಟ್ಟಾಗಿ ಕೇಳಿರಲಿಲ್ಲ. ಒಬ್ಬರದ್ದೇ ಇಬ್ಬರದ್ದೇ ನೂರಾರು ಸ್ನೇಹಿತರ ಇಂಪಾದ ಧ್ವನಿ ಚಕಚಕನೇ ಎದ್ದು ಆಚೆಗೆ ಬಂತು. ಹತ್ತಿರದಲ್ಲಿಯೇ ಇದ್ದ ದರ್ಜಿ ಹಕ್ಕಿಯ ಬಳಿಗೆ ಹೋಗಿ ಕುಳಿತ ಮರಿ ಹೊನ್ನಕ್ಕಿ ಚಿಂಳಿ.... ಚಿಂಳಿ.... ಅಂತ ಇಂಪಾಗಿ ಹಾಡಲು ಪ್ರಯತ್ನಿಸತೊಡಗಿತು.

ಆಗ ಹೊನ್ನಕ್ಕಿ ದಂಪತಿಗಳು ತಮ್ಮ ಮರಿ ಅದೇ ದಿನ ಮೊಟ್ಟ ಮೊದಲ ಬಾರಿಗೆ ಸ್ವ–ಆಸಕ್ತಿಯಿಂದ ಹಾಡುತ್ತಿರುವುದನ್ನ ನೋಡಿ ಸಂತಸಗೊಂಡವು. ಕೆಲ ಸಮಯದ ಬಳಿಕ ಎಲ್ಲವೂ ಮುಂಜಾನೆಯ ಉಪಹಾರಕ್ಕಾಗಿ ಅದೇ ಕಬ್ಬನ್ ಪಾರ್ಕ್‌ನಲ್ಲಿದ್ದಂತಹ ಕೆಲವು ಸ್ಥಳಗಳಲ್ಲಿ ಅಲೆದಾಡಿದವು. ಒಂದಿಷ್ಟು ಉಪಹಾರ ಸಿಕ್ಕಿತು. ಅಲ್ಲದೆ ಅಲ್ಲೊಂದು ಹೂವಿನ ತೋಟವಿತ್ತು. ಆ ತೋಟದ ಸೌಂದರ್ಯವನ್ನ ಹೆಚ್ಚಿಸಲು ಮಧ್ಯಭಾಗದಲ್ಲಿ ಎತ್ತೆತ್ತರಕ್ಕೆ ನೀರನ್ನ ಚಿಮ್ಮುವ ಕಾರಂಜಿಯೊಂದು ನಿರ್ಮಿಸಲಾಗಿತ್ತು. ಅದರ ಸುತ್ತಮುತ್ತ ಸಾಕಷ್ಟು ನೀರು ಇತ್ತು. ಅದನ್ನು ಹೊರತುಪಡಿಸಿ ಅಲ್ಲಲ್ಲಿ ಹೂವಿನ ಗಿಡಗಳಿಗೆ ನೀರುಣಿಸಲು ದೂರದೂರಕ್ಕೆ ನೀರನ್ನ ಎರಚುವ ಕಾರಂಜಿಗಳೂ ಇದ್ದವು. ಹಾಗಾಗಿ ಎಲ್ಲ ಹಕ್ಕಿಗಳಿಗೆ ಕುಡಿಯುವ ನೀರಿನ ಕೊರತೆ ಇರಲಿಲ್ಲ.

ಪ್ರಕಾಶಕರು: ಶ್ರೀ ಅಮ್ಮ ಪ್ರಕಾಶನ, ಸರಸ್ವತಿ ನಿಲಯ, ತಿಮ್ಮಯ್ಯ ಕಾಂಪೌಂಡ್, ಇಮ್ಮಡಿಹಳ್ಳಿ ಮುಖ್ಯ ರಸ್ತೆ, ವೈಟ್‌ಫೀಲ್ಡ್,
ಬೆಂಗಳೂರು – ೫೬೦ ೦೬೬, ಮೊ.೯೮೪೫೪೭೫೦೩೮, ಈ ಮೈಲ್ : hsbyakod@gmail.com, ಬೆಲೆ : ರೂ.೭೦



ತಾಳಲೆಂತು ಬಾಳಲೆಂತು ಅವನಿಲ್ಲದ ವೇಳೆಯ ಕಾಲವೆಂಬ ಕಡು ವೈರಿಗೆ
ಹೋಗಿ ಬುದ್ಧಿ ಹೇಳೆಯಾ, ಯಾಕೆ ಯುಗವೆ ಸಾಗೆ ಮುಂದೆ
ಸಾಗು ಸಾಗು ಎಂದರೂ॥
–ಎಚ್.ಎಸ್.ಶಿವಪ್ರಕಾಶ್





ಪ್ರಕಾರ : ವೈದ್ಯ ಸಾಹಿತ್ಯ
ಬಹುಮಾನ ವಿಜೇತ ಕೃತಿ :
ಅಂತಃಕರಣ
ಲೇಖಕರು : ಡಾ.ಆಶಾ ಬೆನಕಪ್ಪ

# ಡಾ. ಹೆಚ್.ಡಿ. ಚಂದ್ರಪ್ಪಗೌಡ ಪುಸ್ತಕ ಬಹುಮಾನ





## ಡಾ.ಆಶಾ ಬೆನಕಪ್ಪ

ನಾಡಿನ ಪ್ರಸಿದ್ಧ ವೈದ್ಯರಾಗಿರುವ ಡಾ.ಆಶಾ ಬೆನಕಪ್ಪ ಅವರು ಉತ್ತಮ ಲೇಖಕರೂ ಹೌದೆನ್ನುವುದಕ್ಕೆ 'ಅಂತಃಕರಣ' ವೇ ಸಾಕ್ಷಿ. ಬೆಂಗಳೂರಿನ ಬಿ.ಎಂ.ಸಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿರುವ ಡಾ.ಆಶಾ ಬೆನಕಪ್ಪ ಅವರು ತಮ್ಮ ವೈದ್ಯಕೀಯ ಕ್ಷೇತ್ರದ ಸೇವೆಗಾಗಿ ಹಲವು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಗೌರವಗಳಿಗೆ ಪಾತ್ರರಾಗಿದ್ದಾರೆ.




### ತೀರ್ಪುಗಾರರ ಅಭಿಮತ:

## ವೈದ್ಯನ ಜ್ಞಾನದೊಂದಿಗೆ ರೋಗಿಯ ಅನುಭವಗಳ ದಾಖಲೆ

ಆಸಕ್ತಿಪೂರ್ಣವಾಗಿ, ಭಾವನಾತ್ಮಕವಾಗಿ ಆದರೆ ವಸ್ತುನಿಷ್ಟವಾಗಿ ಬರೆದ ವೈದ್ಯಕೀಯ ಸಾಹಿತ್ಯ ಹೇಗೆ ಓದುಗನನ್ನು ಪುಸ್ತಕವನ್ನು ಕೆಳಗಿಡದೆ ಒಂದೇ ಗುಕ್ಕಿನಲ್ಲಿ ಓದಿಸಿಕೊಂಡು ಹೋಗುತ್ತದೆ ಎನ್ನುವುದಕ್ಕೆ ಸಾಕ್ಷಿಯಾಗಿ 'ಅಂತಃಕರಣ' ಕೃತಿಯಿದೆ. ವೈಜ್ಞಾನಿಕ, ತಾಂತ್ರಿಕ ಅಂಶಗಳು ಇದ್ದರೂ ಅವುಗಳನ್ನು ಹೇಳುವ ವೈದ್ಯನ ಜ್ಞಾನದೊಂದಿಗೆ , ರೋಗಿಯ ಅನುಭವಗಳನ್ನೂ ದಾಖಲಿಸುವುದು ಈ ಕೃತಿಯ ವಿಶೇಷ. ಎಲ್ಲಿಯೂ ವೈಭವೀಕರಣದ ಅತಿಗೆ ಹೋಗದೆ ವಾಸ್ತವಿಕತೆಯ ನೆಲೆಯಲ್ಲಿಯೇ ಸಾಗುವುದು ಈ ಕೃತಿಯನ್ನು ವೈದ್ಯಕೀಯ ಸಾಹಿತ್ಯದ ಉತ್ತಮ ಕೃತಿಗಳಲ್ಲಿ ಒಂದಾಗುವಂತೆ ಮಾಡಿದೆ.

## ಬಹುಮಾನಿತ ಕೃತಿಯಿಂದ...



# ಜೀವನ ಪರ್ಯಂತ ಮರೆಯಲಾಗದ ಎರಡು ಸನ್ನಿವೇಶಗಳು

ಹೊಸ ವರ್ಷದ ನನ್ನ ಆರಂಭ ನಾನು ರೂಢಿಸಿಕೊಂಡು ಬಂದ ನ್ಯಾಯ, ನೀತಿ ದಾನಗಳಂಥ ನೈತಿಕ ಮೌಲ್ಯಗಳ ಅನುಸರಣೆಯೊಂದಿಗೆ ಶುರುವಾಯಿತು. ಪ್ರಸಕ್ತ ಸಮಾಜದಲ್ಲಿನ ವರ್ಗೀಕೃತ ಶ್ರೇಣಿ ವ್ಯವಸ್ಥೆಗೆ ಹೊಂದಿಕೊಳ್ಳುವುದು ನನಗೆ ತುಂಬಾನೇ ಹಿಂಸೆ. ಕೆಲವೊಮ್ಮೆ ಮೌಲ್ಯಗಳೊಂದಿಗೆ ಬೆಳೆದಿದ್ದೇ ತಪ್ಪು ಎನ್ನುವ ಭಾವನೆಯೂ ಕಾಡಿ, ಅಂಥ ಸಂದರ್ಭಗಳಲ್ಲಿ ಅಪ್ಪಾಜಿಯೊಂದಿಗೆ ಜಗಳ ಆಡಿದ್ದೇನೆ. ಒಂದಂತೂ ಸ್ಪಷ್ಟ – ತಕ್ಷಣ ಬದಲಾಗುವುದು ನನಗೆ ಸಾಧ್ಯವಿಲ್ಲ. ಆದರೂ ನಾನು ಬದಲಾಗುತ್ತೇನೆ ಎಂದು ನನಗೆ ನಾನೇ ಹೇಳಿಕೊಳ್ಳುವ ಮೂಲಕ ಹೆಚ್ಚು ಘಾಸಿಗೊಳಗಾಗುವ ಸಂದರ್ಭವನ್ನು ತಪ್ಪಿಸಿಕೊಳ್ಳಲು ಪ್ರಯತ್ನಿಸುವೆ.

೨೦೧೨ ನವೆಂಬರ್ ೧೬ ರ ಕೆಲಸವನ್ನು ಇನ್ನೂ ಪೂರ್ಣಗೊಳಿಸಲು ಸಾಧ್ಯವಾಗದಿರುವ ಬೇಸರ ನನ್ನದು. ಅಂದು ಜೀವನ ಪರ್ಯಂತ ಮರೆಯಲಾಗದ ಎರಡು ಸನ್ನಿವೇಶಗಳು ನಡೆದವು. ಮೊದಲನೆಯದು, ಹುದ್ದೆಯೊಂದರ ಸಂದರ್ಶನ ಎದುರಿಸಿದ್ದು, ಎರಡನೆಯದು ಸಂಜೆ ನಡೆದ ದೂರದರ್ಶನ ಚಂದನ ವಾಹಿನಿ ಪ್ರಶಸ್ತಿ ಪ್ರಧಾನ ಸಮಾರಂಭ. ವೇದಿಕೆ ಮೇಲೆ ಜಾನಪದ ಕಲಾವಿದ ಮಾರಪ್ಪ ದಾಸರ ವೀಡಿಯೋ ತುಣುಕುಗಳನ್ನು ತೋರಿಸಲಾಗುತ್ತಿತ್ತು. ಅವರು ಜೀವನೋಪಾಯಕ್ಕಾಗಿ ಭಿಕ್ಷಾಟನೆ ಮಾಡುತ್ತಿರುವವರು ಅವರನ್ನು ಭೇಟಿ ಮಾಡಿ ನನ್ನ ಪರ್ಸ್‌ನಲ್ಲಿದ್ದ ಹಣವನ್ನೆಲ್ಲಾ ಕೊಟ್ಟುಬಿಡಬೇಕು ಎನಿಸಿತು. ಆದರೆ ಜಾನಪದ ಕಲೆಗಾಗಿ ಚಂದನ ವಾಹಿನಯ ಮೊದಲ ಪ್ರಶಸ್ತಿಯನ್ನು ಪಡೆದುಕೊಳ್ಳುತ್ತಿರುವ ಅವರಿಗೆ ಅದು ಅಗೌರವ ಸಲ್ಲಿಸಿದಂತಾಗಬಹುದು ಎನ್ನಿಸಿ ಸುಮ್ಮನಾದೆ. ಅವರು ಗುಲ್ಬರ್ಗ ಜಿಲ್ಲೆ ಯಲಬುರ್ಗಿ ತಾಲ್ಲೂಕಿನ ತುಮರ ಗುಬ್ಬಿ ಗ್ರಾಮದವರು. ದಟ್ಟ ದಾರಿದ್ರ್ಯವಿದ್ದರೂ ನಮ್ಮ ಶ್ರೀಮಂತ ಸಂಸ್ಕೃತಿಯ ಸಂಪ್ರದಾಯವನ್ನು ಜೀವಂತವಾಗಿರಿಸಿಕೊಂಡು ಬಂದ ಜಾನಪದ ಕಲಾವಿದರ ಪೀಳಿಗೆಗೆ ಸೇರಿದವರು.

ಮಾರಪ್ಪ ದಾಸರನ್ನು ಪ್ರಶಸ್ತಿಗೆ ಆರಿಸಿದ್ದಕ್ಕಾಗಿ ಆಯ್ಕೆ ಸಮಿತಿಯ ಅಧ್ಯಕ್ಷ ನ್ಯಾಯಮೂರ್ತಿ ಡಾ. ಶಿವರಾಜ್ ಪಾಟೀಲ್ ಮತ್ತು ಅವರ ತಂಡವನ್ನು ಅಭಿನಂದಿಸುವೆ. ದೂರದರ್ಶನ ಕೇಂದ್ರದ ಡಾ. ಮಹೇಶ್ ಜೋಷಿ ಮತ್ತು ತಂಡಕ್ಕೆ ನನ್ನ ವಂದನೆಗಳು. ಇಲ್ಲಿ ಪ್ರಶಸ್ತಿ ಪಡೆದವರಾರೂ ಪ್ರಭಾವ ಅಥವಾ ಲಾಬಿ ಮಾಡಿದವರಲ್ಲ. ಅವರ ಅರ್ಹತೆ, ಸಾಧನೆಯನ್ನು ಪ್ರಶಸ್ತಿ ಹುಡುಕಿಕೊಂಡು ಬಂದಿತ್ತು. ನ್ಯಾಯಮೂರ್ತಿಗಳು ತಮ್ಮ ಪ್ರಧಾನ ಭಾಷಣದಲ್ಲಿ ಇದನ್ನೇ ಹೇಳಿದರು.

ಪ್ರಕಾಶಕರು: ಸಿರಿಗನ್ನಡ ಪುಸ್ತಕ ಮನೆ, ದುರ್ಗಿಗುಡಿ ಶಾಲೆಯ ಹತ್ತಿರ, ಶಿವಮೊಗ್ಗ – ೫೭೭ ೨೦೧
ಮೊ.೯೩೪೧೦೬೮೨೪೨ / ೯೪೮೦೧೫೦೪೯೧, ಬೆಲೆ : ರೂ.೩೦೦

## ಪ್ರತಿಸ್ಪಂದನ


ಕರ್ನಾಟಕ ಸಂಘ (ರಿ.)

ವಾರ್ತಾಪತ್ರ

ಈ ಸಾವು ನ್ಯಾಯವೇ?

ತಿಮ್ಮಯ್ಯ ಅವರ ಅಗಲಿಕೆ ಕರ್ನಾಟಕ ಸಂಘ ಅಥವಾ ರಾಷ್ಟ್ರೀಯ ಶಿಕ್ಷಣ ಸಮಿತಿಗೆ ಮಾತ್ರವಲ್ಲ, ಇಡೀ ಶಿವಮೊಗ್ಗಕ್ಕೆ ಒಂದು ಬಗೆಯ ಅನಾಥಪ್ರಜ್ಞೆಯನ್ನು ಮೂಡಿಸಿದೆ.

ಕಂಬನಿ

ಅಗಲಿದ ಜನತೆಯ ಕವಿ

ಮಂಡೇಲಾ ಎಂಬ ನಮ್ಮ ಅಂಬೇಡ್ಕರ್

# ವಾರ್ತಾ ಪತ್ರದಲ್ಲಿ ಮೈತಳೆಯುತ್ತಿರುವ
# ಜನಪರ ನೆಲೆಗಳು



ಮಾನ್ಯ ಸಂಪಾದಕರೇ,

ಶಿವಮೊಗ್ಗ ಕರ್ನಾಟಕ ಸಂಘದ ವಾರ್ತಾಪತ್ರದ ಇತ್ತೀಚಿನ ಕೆಲವು ಸಂಚಿಕೆಗಳನ್ನು ಓದಿ ಸಂತೋಷವಾಯಿತು. ಇಂತಹ ಸಂಘಗಳು ಕೆಲಸ ಮಾಡಬೇಕಾದ ಭಿನ್ನ ಬಗೆಗಳನ್ನು, ಹಲವು ದಶಕಗಳಿಂದ ರೂಪಿಸಿರುವ ಅಪರೂಪದ ಸಂಘಗಳಲ್ಲಿ ನಿಮ್ಮದೂ ಒಂದು. ಪುಸ್ತಕ ಪ್ರಕಟಣೆ, ಪುಸ್ತಕ ಬಹುಮಾನಗಳು, ವಿಶೇಷ ಉಪನ್ಯಾಸಗಳು ಹೀಗೆ ಹಲವು ಬಗೆಯಲ್ಲಿ ಹರಡಿಕೊಂಡಿರುವ ಸಂಘದ ಚಟುವಟಿಕೆಗಳಿಗೆ ಕನ್ನಡಿಯಾಗಿ ವಾರ್ತಾಪತ್ರವೂ ಮೂಡಿ ಬರುತ್ತಿದೆ. ಅದು ತನ್ನ ಉದ್ದೇಶಗಳನ್ನು ಮಾಹಿತಿಗಳನ್ನು ನೀಡುವುದರಾಚೆಗೂ ವಿಸ್ತರಿಸಿಕೊಂಡಿದೆ. ಆದ್ದರಿಂದ ಅದಕ್ಕೆ ಸಾಂಸ್ಕೃತಿಕವಾದ ಆಯಾಮಗಳು ಒದಗಿ ಬಂದಿವೆ. ಭಾಷೆ–ಸಾಹಿತ್ಯಕ್ಕೆ ಸಂಬಂಧಿಸಿದ ಯಾವುದೇ ಕೆಲಸಕ್ಕೆ ಸಹಜವಾದ ಜನಪರವಾದ ನೆಲೆಗಳು ಕೂಡ ಇದರಲ್ಲಿ ನಿಧಾನವಾಗಿ ಮೈತಳೆಯುತ್ತಿವೆ.

ಅದೇನೇ ಇರಲಿ, ಇರುವರೆಗೆ ಮಾಡಿರುವ ಕೆಲಸ ದೊಡ್ಡದು. ಅದಕ್ಕಾಗಿ ಅಭಿನಂದನೆಗಳು. ಈ ವಾರ್ತಾಪತ್ರ ಇತರ ಸಂಘಗಳಿಗೆ ಮಾದರಿಯಾಗಲಿ.

**–ಎಚ್.ಎಸ್.ರಾಘವೇಂದ್ರರಾವ್,**

### ದಿನಾಂಕ ೧೪.೦೪.೨೦೧೪ ರಂದು ಸಂಘವು ಹಮ್ಮಿಕೊಂಡ
## ಮಹಿಳಾ ಯಕ್ಷಗಾನದ ಒಂದು ಝಲಕ್




**ಸಂಪಾದಕರು :** ಸರ್ಜಾಶಂಕರ ಹರಳಿಮಠ,
**ಪ್ರಕಾಶಕರು :** ಡಾ॥ ಎಚ್.ಎಸ್.ನಾಗಭೂಷಣ, ಗೌರವ ಕಾರ್ಯದರ್ಶಿ, ಕರ್ನಾಟಕ ಸಂಘ, ಶಿವಮೊಗ್ಗ
**ಮುದ್ರಕರು :** ಆವಿ ಡಿಸೈನ್ ಡೆಸ್ಕ್, ಮಲ್ಲೇಶ್ವರಂ, ಬೆಂಗಳೂರು.



**ಕತ್ತಲಿನ ತೆರೆಯಿಂದ ಕಂಡ ಚಂದ್ರನಿಗಿಂತ ನಿನ್ನ ವದನವೇ ಪೆಂಪು।**
**ಚಂದ್ರನೆದೆಯ ಬಿಳಿಗನಸಿಗಿಂತಲೂ ನಿನ್ನ ಕನಸುವುದೆ ತಂಪು॥**

**–ಎಚ್.ಎಸ್.ಶಿವಪ್ರಕಾಶ್**



